

ಕಾಯಕವೇ ಕೈಲಾಸ

# ಸಿದ್ಧಗಂಗಾ



ಶಿಕ್ಷಕರ ದಿನಾಚರಣೆಯ
ಹಾರ್ದಿಕ ಶುಭಾಶಯಗಳು

ಸಂಪುಟ : ೫೮ ಸೆಪ್ಟೆಂಬರ್ ೨೦೨೨ ಸಂಚಿಕೆ : ೦೯




ಆಗಸ್ಟ್ ೧೮ ರಂದು ಮೈಸೂರಿನಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ೧೦೭ನೆಯ ಜಯಂತಿ ಮಹೋತ್ಸವವನ್ನು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕರ್ನಾಟಕದ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಥಾವರ್ ಚಂದ್ ಗೆಹ್ಲೋಟ್ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಸ್.ಟಿ. ಸೋಮಶೇಖರ್, ಮೈಸೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಸುನಂದ ಪಾಲನೇತ್ರ ಅವರು ಉಪಸ್ಥಿತರಿದ್ದರು.



ಚಾಮರಾಜನಗರದ ಮಾಜಿ ಶಾಸಕರಾದ ಲಿಂಗೈಕ್ಯ ಸಿ. ಗುರುಸ್ವಾಮಿಯವರ ಎರಡನೆ ವರ್ಷದ ಪುಣ್ಯಸ್ಮರಣೆ ಹಾಗೂ ಧಾರ್ಮಿಕ ಸಭೆಯನ್ನು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು. ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಸಿ. ಗುರುಸ್ವಾಮಿ ಅವರ ಕುಟುಂಬದವರು ಉಪಸ್ಥಿತರಿದ್ದರು.




ಸಿದ್ಧಗಂಗಾ ಪಾಲಿಟೆಕ್ನಿಕ್‌ನಲ್ಲಿ ಜುಲೈ ೧ ರಂದು ಏರ್ಪಡಿಸಿದ್ದ ಮೊದಲ ವರ್ಷದ ವಿದ್ಯಾರ್ಥಿಗಳ ಸ್ವಾಗತ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಕಲ್ಮಠದ ಶ್ರೀಗಳು, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಹಾಗೂ ಶ್ರೀ ಕೆ.ಆರ್. ನಾಗರಾಜ್ ಮೊದಲಾದವರು ಉಪಸ್ಥಿತರಿದ್ದರು.



ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೮ ಸೆಪ್ಟೆಂಬರ್ ೨೦೨೨ ಸಂಚಿಕೆ : ೦೯


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ,
ವಿ. ಸೋಮಶೇಖರಯ್ಯ,
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.
ಮೊ : 91410 36345
email: siddaganganews@gmail.com


## ಒಳಪುಟಗಳಲ್ಲಿ ..................




| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/- <br> ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|





# ಪ್ರಧಾನ ಸಂಪಾದಕರ ನುಡಿ........

ತತ್ತ್ವಜ್ಞಾನಿ, ಮಾಜಿ ರಾಷ್ಟ್ರಪತಿ ಡಾ. ಎಸ್. ರಾಧಾಕೃಷ್ಣನ್ ಅವರ ಜನ್ಮದಿನಾಚರಣೆಯನ್ನು ಅವರ ಆಶಯದಂತೆ ಪ್ರತಿವರ್ಷ ಸೆಪ್ಟೆಂಬರ್ ೫ ರಂದು 'ಶಿಕ್ಷಕರ ದಿನಾಚರಣೆ'ಯನ್ನಾಗಿ ಆಚರಿಸುವ ಮೂಲಕ ಅವರಿಗೆ ಗೌರವವನ್ನು ಸಲ್ಲಿಸಲಾಗುತ್ತಿದೆ. 'ರೈತ ನಮ್ಮ ದೇಶದ ಬೆನ್ನೆಲಬು ಹೇಗೋ; ಹಾಗೆಯೇ ಶಿಕ್ಷಕ ಉತ್ತಮ ನಾಗರಿಕರನ್ನು ರೂಪಿಸುವ ಮಹಾಶಿಲ್ಪಿ. ಮಹಾನ್ ಶಿಲ್ಪಿಗೆ ಗೌರವ ಕೊಡುವುದೆಂದರೆ ನಮ್ಮ ಸಂಸ್ಕೃತಿಗೆ ಗೌರವ ಸಲ್ಲಿಸಿದಂತಾಗುತ್ತದೆ.

ಹತ್ತು ಬೃಹತ್ ಸಂಪುಟಗಳಲ್ಲಿ ಮಾನವನ ನಾಗರಿಕತೆಯ ಇತಿಹಾಸವನ್ನು ಬರೆದ ಎಲ್‌ಡ್ಯುರಾಂಟ್ "Education is the transmission of civilization" ಎಂದು ಹೇಳಿದ್ದಾನೆ. ಶಿಕ್ಷಣದ ಸ್ವರೂಪವನ್ನು ಕುರಿತು ಹೇಳಿರುವ ಸೊಗಸಾದ ಮಾತುಗಳಲ್ಲಿ ಇದೂ ಒಂದು. ಒಬ್ಬ ವಿದ್ಯಾವಂತ ಯಾವುದೇ ಸನ್ನಿವೇಶವನ್ನು ನೋಡುವ ಅಥವಾ ಪ್ರಶ್ನೆ ಮಾಡುವ ರೀತಿಯೇ ಅವನ ವಿದ್ಯೆಗೆ ನಿದರ್ಶನವಾಗಿರುತ್ತದೆ. 'ಸಿವಿಲೈಜೇಷನ್ ಅಥವಾ ನಾಗರಿಕತೆ' ಎನ್ನುವುದು ಒಂದು ಮನೋಧರ್ಮವೂ ಹೌದು, ಹಾಗೆಯೇ ಒಂದು ವ್ಯವಸ್ಥೆಯೂ ಹೌದು. ಶಿಕ್ಷಣ ಸಂಸ್ಥೆಗಳು, ನ್ಯಾಯಾಲಯಗಳು, ಕಲಾ ಕೇಂದ್ರಗಳು, ಗ್ರಂಥಾಲಯಗಳು, ಜನತೆಯ ಅಭಿಪ್ರಾಯವನ್ನು ಪ್ರತಿಬಿಂಬಿಸುವ ಸಂಸ್ಥೆಗಳು ಎಲ್ಲವೂ; ಈ ವ್ಯವಸ್ಥೆಯ ಅಂಗಗಳು. ಈ ವ್ಯವಸ್ಥೆಯನ್ನು ಅರ್ಥಪೂರ್ಣವಾಗಿ, ಸಾರ್ಥಕವಾಗಿ ಉಳಿಸಿಕೊಂಡು ಬೆಳೆಸಿಕೊಂಡು ಬರುವ ಮನೋಧರ್ಮ ಇದರ ಉಸಿರು. ಘರ್ಷಣೆ, ಶೋಷಣೆಗಳನ್ನು ತಡೆಗಟ್ಟಿ, ಪ್ರತಿ ಮನುಷ್ಯನ ವ್ಯಕ್ತಿತ್ವ ಅರಳುವುದಕ್ಕೆ, ಸಮುದಾಯದ ಬದುಕು ಸ್ನೇಹ ಸಹಕಾರಗಳ ನೆಲದಲ್ಲಿ ಬೆಳೆಯುವುದಕ್ಕೆ ನೆರವಾಗುವ ಮನೋಧರ್ಮ ನಾಗರಿಕತೆಯ ಪ್ರಾಣ. ಈ ವಿಶಾಲವಾದ ಭೂಮಿಯ ಮೇಲೆ ಬದುಕನ್ನು ಉತ್ತಮಗೊಳಿಸುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ಘೋರ ಕ್ಷಾಮಗಳು, ಭೀಕರ ಭೂಕಂಪಗಳು, ಪ್ರವಾಹಗಳು, ಸಾಂಕ್ರಾಮಿಕ ಜಾಡ್ಯಗಳು, ಭಯಂಕರ ಯುದ್ಧಗಳು, ಮನುಷ್ಯನೇ ಇಟ್ಟ ತಪ್ಪು ಹೆಜ್ಜೆಗಳು, ನಡೆಸಿದ ಅರ್ಥವಿಲ್ಲದ ಹೋರಾಟಗಳು, ಇವುಗಳ ನಡುವೆಯೂ, ಕೆಲವರು ವಿವೇಕಿಗಳ ಪ್ರಯತ್ನದಿಂದ ನಾಗರಿಕತೆ ಉಳಿದು ಬಂದಿದೆ. ಇದಕ್ಕೆ ಕಾರಣ ಅವನಲ್ಲಿರುವ ಅರಿವಿನ ಜ್ಯೋತಿ ಬೆಳಗುತ್ತಿರುವುದು.

ಪದ್ಮಭೂಷಣ, ತ್ರಿವಿಧದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ ವಿದ್ಯೆಯ ಮಹತ್ವವನ್ನು ಹೀಗೆ ಹೇಳಿದ್ದಾರೆ. "ಜ್ಞಾನವೇ ಜೀವನದ ಮುಖ್ಯವಾಗಿರುವಂತಹ ತತ್ತ್ವ. ಜ್ಞಾನಾರ್ಜನೆ ಮಾಡುವುದು ವಿದ್ಯಾರ್ಥಿಗಳ ಮುಖ್ಯವಾಗಿರುವಂತಹ ಆಸ್ತ್ರ. ಅದು ಮಾಡಬೇಕು, ಜ್ಞಾನರ್ಜನೆ ಮಾಡಬೇಕು, ತಿಳುವಳಿಕೆ ಉಳ್ಳವರಾಗಬೇಕು, ಒಳ್ಳೆ ಚಾರಿತ್ರ್ಯ ಉಳ್ಳವರಾಗಬೇಕು. ಒಳ್ಳೆ ಪ್ರಜೆಗಳಾಗಬೇಕು. ಇದಕ್ಕೆಲ್ಲ ವಿದ್ಯಾಭ್ಯಾಸ ಮುಖ್ಯವಾಗಿರುವಂತಹ ಸಾಧನ. ಅದು ಎಲ್ಲಕ್ಕೂ ಮೂಲಭೂತವಾಗಿರುವ ತತ್ತ್ವ ಬದುಕಿನಲ್ಲಿ ಬೆಳಕನ್ನು ಕಾಣಬೇಕಾದರೆ, ನೆಮ್ಮದಿ ಜೀವನ ಸಾಗಬೇಕಾದರೆ ಶಾಂತಿ, ಸಮೃದ್ಧಿಯ ಜೀವನದ ಅರಿವಿನ ಎಚ್ಚರದಿಂದ ಸಾಧ್ಯ. ಸಂತೋಷಕ್ಕೆ ಸಮನಾದ ಸುಖವಿಲ್ಲ. ಶಾಂತಿಗೆ ಸಮಾನವಾದ ತಪಸ್ಸಿಲ್ಲ. ವಿದ್ಯೆಗಿಂತ ಸಮನಾದ ಸಂಪತ್ತಿಲ್ಲ" ಪರಮಪೂಜ್ಯರ ಈ ಶಿವನುಡಿಗಳನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡರೆ, ವೃತ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ದಾರಿದೀಪವಾಗುತ್ತಿದೆ.

ಶಿಕ್ಷಕರಾದವರು ಹೇಗಿರಬೇಕು, ಯಾವ ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ವಿದ್ಯಾರ್ಥಿಗಳ ಅರಿವಿನ ಜ್ಯೋತಿಯನ್ನು ಬೆಳಗುವಂತೆ ಮಾಡಬೇಕು ಎಂಬುದನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ "ಇಂದು ನಮ್ಮಲ್ಲಿ ಶಿಕ್ಷಕರು ಬಹಳ ಮಂದಿ ಜ್ಞಾನದಾಹಿಗಳಾಗುತ್ತಿಲ್ಲ. ಅಧ್ಯಯನಶೀಲರಾಗಿಲ್ಲ. ಶಿಕ್ಷಕ ನೀತಿ ಸಂಪನ್ನನಾಗಿರಬೇಕು. ಚಾರಿತ್ರ್ಯ ಶುದ್ಧಿಯ ಒಡೆಯನಾಗಬೇಕು, ಪ್ರೀತಿ ಪ್ರೇಮಗಳ ಸತ್ಪ್ರಜೆಯಾಗಿರಬೇಕು. ಏಕೆಂದರೆ ಆಚಾರ್ಯ ಸ್ಥಾನ ಪರಮಪವಿತ್ರವಾದುದು. ಇಹಃ ಪರಗಳೆರಡನ್ನು ಶುದ್ಧಿಗೊಳಿಸುವ ಕಾರ್ಯಕ್ಷೇತ್ರ. ಶಿಕ್ಷಕ ಎಲ್ಲಕ್ಕೂ ಮೊದಲು ಚಾರಿತ್ರ್ಯ ಶುದ್ಧಿಯನ್ನು ಕಾಪಾಡಿಕೊಳ್ಳಬೇಕು. ಆಚಾರ್ಯ ಪದವಿ ಸದಾ ಜಾಗೃತವಾಗಿರುವಂಥದ್ದು. ಸಮಾಜ ಅದರಲ್ಲೂ ತನ್ನ ಬಳಿಗೆ ಕಲಿಯಲು ಬರುವ ವಿದ್ಯಾರ್ಥಿಗಳು ತೆರೆದ ಕಣ್ಣಿನಿಂದ ಶಿಕ್ಷಕನನ್ನು ನೋಡುತ್ತಿರುತ್ತವೆ. ಅಧ್ಯಯನ ಶೀಲನಾಗದವ ಸಮರ್ಥ ಶಿಕ್ಷಕನೆನಿಸಲಾರ. ಅವನೊಂದು ಚಲಿಸುವ ಜ್ಞಾನಭಂಡಾರವಾಗಬೇಕು." ಪರಮಪೂಜ್ಯರ ಒಂದೊಂದು ನುಡಿಗಳನ್ನು ಶಿಕ್ಷಕರಾದವರು ಅರ್ಥಮಾಡಿಕೊಂಡು, ತಮ್ಮ ವೃತ್ತಿಜೀವನದಲ್ಲಿ ಅಳವಡಿಸಿಕೊಂಡಾಗ, ಶಿಕ್ಷಕ ವೃತ್ತಿಗೆ ಘನತೆ, ಗೌರವ, ಪಾವಿತ್ರ್ಯತೆ ದೊರೆಯುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ







# ಶ್ರೀವಾಣಿ

## ದೇವರು ಇದ್ದಾನೆಯೇ? ಇದ್ದರೆ ಹೇಗಿದ್ದಾನೆ? ಏನು ಮಾಡುತ್ತಾನೆ?

ಒಮ್ಮೆ ಅಕ್ಬರನು ಆಸ್ಥಾನದ ಪಂಡಿತರನ್ನೆಲ್ಲಾ ಸಭೆ ಸೇರಿಸಿ ಈ ನನ್ನ ಪ್ರಶ್ನೆಗಳಿಗೆ ಉತ್ತರ ಕೊಡಿ ಎಂದು ಈ ಮೇಲಿನ ಪ್ರಶ್ನೆಗಳನ್ನು ಕೇಳುತ್ತಾನೆ. ಯಾರೊಬ್ಬರೂ ಉತ್ತರವನ್ನು ಕೊಡಲಾಗಲಿಲ್ಲ. ಆಗ ಒಂದು ಸಣ್ಣ ಹುಡುಗಿ ಬಂದು ನಾನು ನಿನ್ನ ಪ್ರಶ್ನೆಗಳಿಗೆ ಉತ್ತರ ಕೊಡುತ್ತೇನೆ. ಆದರೆ ಒಂದು ಷರತ್ತು; 'ಪ್ರಶ್ನೆ ಕೇಳುವವನು ಕೆಳಗಿರಬೇಕು, ಉತ್ತರ ಹೇಳುವವರು ಮೇಲಿರಬೇಕು' ಎನ್ನುತ್ತಾಳೆ. ಅದಕ್ಕೆ ಅಕ್ಬರ್ ಒಪ್ಪಿ ಸಿಂಹಾಸನವಿಳಿದು ಕೆಳಗೆ ಬರುತ್ತಾನೆ. ಪ್ರಶ್ನೋತ್ತರ ಪ್ರಾರಂಭವಾಗುತ್ತದೆ.

ಅಕ್ಬರ್ : ದೇವರಿದ್ದಾನೆಯೇ? ಇದು ನನ್ನ ಮೊದಲನೆಯ ಪ್ರಶ್ನೆ.

ಬಾಲಕಿ : ಇದ್ದಾನೆ.

ಅಕ್ಬರ್ : ಹೇಗೆ ಹೇಳುವೆ?

ಬಾಲಕಿ : ಒಂದು ಲೋಟ ಹಾಲು ತೆಗೆದುಕೊಂಡು ಬಾ.

ಅಕ್ಬರ್ : ತೆಗೆದುಕೋ

ಬಾಲಕಿ : ಈ ಹಾಲಿನಲ್ಲಿ ತುಪ್ಪ ಇದೆಯಾ? ಇಲ್ಲವೋ?

ಅಕ್ಬರ್ : ಇದೆ.

ಬಾಲಕಿ : ಕಾಣುತ್ತಿದೆಯಾ?

ಅಕ್ಬರ್ : ಇಲ್ಲ

ಬಾಲಕಿ : ಯಾವಾಗ ತುಪ್ಪ ಇದೆ ಎಂದು ಗೊತ್ತಾಗುತ್ತದೆ?

ಅಕ್ಬರ್ : ಕಾಯಿಸಿ, ಕಡೆದು, ಬೆಣ್ಣೆ ತೆಗೆದು ಕಾಯಿಸಿದಾಗ.

ಬಾಲಕಿ : ಅದೇ ರೀತಿ ನಮ್ಮೊಳಗೆ ದೇವರಿದ್ದಾನೆ. ಅದನ್ನು ಅನುಭಾವ ಮಥನದೊಂದಿಗೆ ಕಾಣಬೇಕು.

ಅಕ್ಬರ್ : ನನ್ನ ಎರಡನೆಯ ಪ್ರಶ್ನೆ ; ದೇವರು ಹೇಗಿದ್ದಾನೆ ? ಅವನ ಮುಖ ಕೈಕಾಲುಗಳನ್ನು ಯಾವ ಕಡೆ ತಿರುಗಿಸಿಕೊಂಡಿದ್ದಾನೆ? ಹೇಳು.

ಬಾಲಕಿ : ಒಂದು ಮೇಣದ ಬತ್ತಿ ಮತ್ತು ಬೆಂಕಿಪೊಟ್ಟಣ ತೆಗೆದುಕೊಂಡು ಬಾ.

ಅಕ್ಬರ್ : ತಂದುಕೊಡುವನು

ಬಾಲಕಿ : ಮೇಣದ ಬತ್ತಿಯನ್ನು ಹಚ್ಚಿ ಅಕ್ಬರ್‌ನನ್ನು ಕರೆದು–'ಈ ಉರಿಯುತ್ತಿರುವ ಮೇಣದ ಬತ್ತಿಯ ಮುಖ ಯಾವ ಕಡೆ ಇದೆ? ಹೇಳು'.

ಅಕ್ಬರ್ : ಸುತ್ತಲೂ ನೋಡಿ ಎಲ್ಲಾ ಕಡೆಯೂ ಇದೆ.

ಬಾಲಕಿ : ಹಾಗೆಯೇ ದೇವರು ಎಲ್ಲಾ ಕಡೆ ಇದ್ದಾನೆ. ವಿಶ್ವತೋಚಕ್ಷು, ವಿಶ್ವತೋಬಾಹು, ವಿಶ್ವತೋಪಾದ.

ಅಕ್ಬರ್ : ನನ್ನ ಮೂರನೆಯ ಪ್ರಶ್ನೆ ; ದೇವರು ಏನು ಮಾಡುತ್ತಾನೆ?

ಬಾಲಕಿ : ನಾನು ಮಾಡಿದ ಕೆಲಸವನ್ನೇ ಅವನು ಮಾಡುತ್ತಾನೆ. ಮೇಲಿರುವವರನ್ನು ಕೆಳಗಿಳಿಸುತ್ತಾನೆ? ಕೆಳಗಿರುವವರನ್ನು ಮೇಲಕ್ಕೇರಿಸುತ್ತಾನೆ.

ಬಾಲಕಿಯ ಮಾತುಗಳನ್ನು ಕೇಳಿ ಅಕ್ಬರ್ ಸಂತೋಷಪಟ್ಟು ಬಹುಮಾನಕೊಟ್ಟು ಕಳುಹಿಸುತ್ತಾನೆ.

ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ



ಡಂಬು ಮತ್ಸರಕ್ಕೆ ಇಂಬುಗೊಡದಿರಬಲ್ಲಡೆ ಶರಣ
ಶಂಭು ಪದ ಪದ್ಮಭಕ್ತಿ ನಂಬುಗೆವಿಡಿದು ಅಗಲದಿರಬಲ್ಲಡೆ ಶರಣ
ಸೂಸಲಿಯ್ಯದೆ ಮನವನೀಶವಾಸದಲ್ಲಿ ಮೀಸಲಾಗಿರಿಸಿಕೊಂಡಿರಬಲ್ಲಡೆ
ಆ ಶರಣನ ಜಗದೀಶ್ವರನೆಂಬೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ಮಹೇಶ್ವರನ ಶರಣ – ಮಹೇಶ್ವರಸ್ಥಲದೊಳಗಣ ಶರಣ ಸ್ಥಲದಾಚರಣೆಯನು ನಿರೂಪಿಸಿಹರು :– ಡಂಬು ಮತ್ಸರಕ್ಕೆ : ಡಂಬು – ಹಿರೇತನದ ಬೂಟಕತ್ವವು ಮತ್ಸರಕ್ಕೆ – ಕೇಣಸರಕ್ಕೆ, ಇಂಬುಗೊಡದಿರಬಲ್ಲಡೆ – ತೆರಹುಗೊಡದಿರಬಲ್ಲಡೆ, ಶರಣ-ಶಿವಶರಣನು, ಶಂಭು-ಸುಖೋತ್ಪತ್ತಿಯ ಜನಕನಾದಂಥ ಪರಶಿವಲಿಂಗದ, ಪದಪದ್ಮ ಭಕ್ತಿ- ಪಾದಕಮಲದ ಶ್ರದ್ಧೆಯು, ನಂಬುಗೆವಿಡಿದು-ವಿಶ್ವಾಸವನು ದೃಢವಿಡಿದು, ಅಗಲದಿರಬಲ್ಲಡೆ-ವಿಯೋಗವಾಗದೆ ಕೂಡಿರಬಲ್ಲರೆ, ಶರಣ-ಶಿವಶರಣನು, ಸೂಸಲಿಯ್ಯದೆ ಮನವ-ಮನವು ನೆನಹು, ಹಲವು ಭಾಷೆ, ಹಲವು ವರ್ತನೆಯೊಡನೆ ಕೂಡಿ ಚರಿಸಿ ಜಾಗೆಯಾಗದೊಡನೆ, ಈಶಪದದಲ್ಲಿ-ಮಹಾಲಿಂಗಪದದಲ್ಲಿ, ಮೀಸಲಾಗಿರಿಸಿಕೊಂಡಿರ ಬಲ್ಲಡೆ-ಉನ್ಮನೆ ಮನಸ್ಸಾಗಿ ಅಳವಡಿಸಿಕೊಂಡಾಚರಿಸುತ್ತಿರಬಲ್ಲರೆ, ಆ ಶರಣನ-ಶಿವಶರಣನ, ಜಗದೀಶ್ವರನೆಂಬೆನು-ಜಗತ್‌ಕರ್ತೃವಾದ ಪರಶಿವಲಿಂಗವೆಂದು ಹೇಳುವೆನು. ಕಾಣಾ-ಕಂಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಲ್ಯಾಣ ಪಟ್ಟಣ ಶರಣರ ಸುಕ್ಷೇತ್ರ
ಬಲ್ಲ ಭಕುತರ ಕೈಲಾಸ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವೇಶ ನಡೆಸಿದ ನಿತ್ಯ ದಾಸೋಹವ
ಅಸಮಾಕ್ಷ ಬಂಟ ಬಸವೇಶ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಡತನ ಬಂದರೆ ಬಾಚಿ ತಬ್ಬುವೆ ಗುರುವೆ
ಒಡೆಯ ನೀನಿರಲು ಭಯವಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವ್ಯರ್ಥ ಮಾಡಲಿ ಬೇಡ ನಿತ್ಯದ ಸಮಯದ
ಕರ್ತವ್ಯ ಮರೆತು ನಡೆಬೇಡ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾನವ ಜನ್ಮವು ಶ್ರೇಷ್ಠ ರತ್ನವೆಂದೆ
ಜತನವಾಗಿರಿಸು ಜಗದೊಳಗೆ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೇಗಿಲ ಹಿಡಿದರೆ ತೂಗಿ ಬರುವುದು ಬೆಳೆಯು
ಬಾಗಿ ಬಾಳಿದರೆ ಸಿಹಿಯಹುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರ್ಪಣ ಅನುಭಾವ ಅರ್ಚನಾದಿಗಳೆಲ್ಲ
ಅಂಗಗುಣವಳಿವುದಕೆ ಸಹಕಾರಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗಗುಣಗಳಳಿದು ಲಿಂಗಗುಣಗಳು ಬೆಳೆದು
ಅಂಗಲಿಂಗಳೆರಡು ಬಡಬೆರೆದು । ಬಾಳೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಡಂಬರ ಅದ್ದೂರಿ ವೈಭವಗಳು ಸಲ್ಲದು
ಸರಳ ಜೀವನ ಸಾಕು ಸಾಧನೆಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ಪಥದಲ್ಲಿ ಕರುಣೆಯ ಹರಿದಿದೆ
ಹಿರಿದಾರಿ ತೆರೆದಿದೆ ಎಲ್ಲರಿಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ವರದಿ

# ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಗೆ ಮೆಡಿಕಲ್ ಕಾಲೇಜು ಮಂಜೂರು

**"ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆರೋಗ್ಯಸೇವೆ ಆಶಯ ಸಾಕಾರ"**
**– ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳುವರು**

ಸಿದ್ಧಗಂಗಾ ಮಠದಿಂದ ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆಯನ್ನು ತೆರೆದು ಜನಸಾಮಾನ್ಯರಿಗೆ ಶಿಕ್ಷಣದಿಂದ ಆರೋಗ್ಯ ಸೇವೆಯನ್ನು ನೀಡಬೇಕೆಂಬುದು ಹಿಂದಿನ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರ ಅಭಿಲಾಷೆಯಾಗಿತ್ತು. ಇದಕ್ಕಾಗಿ ೧೯೬೪ರಿಂದಲೂ ಪ್ರಯತ್ನಗಳು ನಡೆಯುತ್ತಾ ಬಂದಿವೆ. ೧೯೮೨–೮೪ರಲ್ಲಿ ನಿರಂತರ ಪ್ರಯತ್ನ ಮಾಡಿದರೂ ಮಠಕ್ಕೆ ದಕ್ಕಲಿಲ್ಲ. ಕಡೆಗೂ ಸ್ವಾಮೀಜಿ ಅವರು ಆ ಪ್ರಯತ್ನವನ್ನು ಬಿಟ್ಟರು. ಪ್ರಸ್ತುತ ಸಿದ್ಧಗಂಗಾ ಮಠಕ್ಕೆ ಖಾಸಗಿ ಮೆಡಿಕಲ್ ಕಾಲೇಜನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಮಂಜೂರು ಮಾಡಿದ್ದು, ಲಿಂಗೈಕ್ಯ ಸ್ವಾಮೀಜಿಯವರ ಆರೋಗ್ಯ ಸೇವೆ ಆಶಯ ಈಡೇರಿದೆ ಎಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಹರ್ಷ ವ್ಯಕ್ತಪಡಿಸಿದರು.

ಸಿದ್ಧಗಂಗಾ ವಿದ್ಯಾಸಂಸ್ಥೆ ಆಡಳಿತ ಕಚೇರಿಯಲ್ಲಿ ಮೆಡಿಕಲ್ ಕಾಲೇಜು ಸಲಹಾ ಸಮಿತಿ ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಶ್ರೀಗಳು ಸಿದ್ಧಗಂಗಾ ಮಠಕ್ಕೆ ೧೫೦ ಸೀಟ್‌ಗಳ ಮೆಡಿಕಲ್ ಕಾಲೇಜು ಮಂಜೂರಾತಿ ನೀಡಲಾಗಿದ್ದು, ಸಕ್ಷಮ ಪ್ರಾಧಿಕಾರದಿಂದ ಲೆಟರ್ ಆಫ್ ಫರ್ಮಿಷನ್ ಲಭ್ಯವಾಗಿದೆ. ಈ ಶೈಕ್ಷಣಿಕ ವರ್ಷದಿಂದಲೇ ಕಾಲೇಜು ಕಾರ್ಯಾರಂಭ ಮಾಡಲಿದ್ದು, ನೀಟ್ ಫಲಿತಾಂಶದ ಬಳಿಕ ನಿಯಮಾನುಸಾರ ದಾಖಲೆ ಮಾಡಿಕೊಳ್ಳಲಾಗುವುದು. ಎನ್‌ಎಂಸಿ ಮಾನದಂಡಗಳನುಸಾರವೇ ಸಿಬ್ಬಂದಿ, ಸೌಲಭ್ಯವನ್ನು ಒದಗಿಸಲಾಗುವುದು. ಹಿಂದೆ ಇದ್ದ ನಿಯಮಾವಳಿಗಳಲ್ಲಿ ಮೆಡಿಕಲ್ ಕಾಲೇಜು ಮಠಕ್ಕೆ ಪಡೆಯುವುದು ಸವಾಲಾಗಿತ್ತು. ಪ್ರಸ್ತುತ ಪ್ರಧಾನಿ ಶ್ರೀ ನರೇಂದ್ರ ಮೋದಿಯವರು ಮೆಡಿಕಲ್ ಕಾಲೇಜು ಮಂಜೂರಾತಿ ನಿಯಮಾವಳಿಗಳನ್ನು ಸಡಿಲಗೊಳಿಸಿದ ಪರಿಣಾಮ ೧೨ ಎಕರೆ ಪ್ರದೇಶದಲ್ಲಿ ಸುಸಜ್ಜಿತ ಮೆಡಿಕಲ್ ಕಾಲೇಜು ಪ್ರಾರಂಭಿಸಲು ಅವಕಾಶವಾಗಿದೆ. ಆಗಂತ ಮಠಕ್ಕೆ ವಿಶೇಷ ವಿನಾಯಿತಿಗಳೇನು ದೊರೆತಿಲ್ಲ ಎಂದು ಸ್ಪಷ್ಟಪಡಿಸಿದರು.









ಸಿದ್ಧಗಂಗಾ ವಿದ್ಯಾಸಂಸ್ಥೆ ಕಾರ್ಯದರ್ಶಿ ಶ್ರೀ ಟಿ.ಕೆ.ನಂಜುಂಡಪ್ಪ ಅವರು ಮಾತನಾಡಿ "೧೯೬೩ರಲ್ಲಿ ಸ್ಥಾಪನೆಯಾದ ಸಿದ್ಧಗಂಗಾ ವಿದ್ಯಾಸಂಸ್ಥೆ ಮೆಡಿಕಲ್ ಕಾಲೇಜ್ ಪ್ರಾರಂಭಿಸಲು ಪ್ರಯತ್ನ ಮಾಡಲಾಗಿತ್ತು. ಆದರೆ ಒತ್ತಾಯಪೂರ್ವಕವಾಗಿ ಮೆಡಿಕಲ್ ಕಾಲೇಜು ಪಡೆಯಬೇಕೆಂಬ ಇಚ್ಛೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರಿಗಿರಲಿಲ್ಲ. ಹೀಗಾಗಿ ಮೆಡಿಕಲ್ ಕಾಲೇಜು ಆರಂಭ ವಿಳಂಬವಾಯಿತು. ಸಿದ್ಧಗಂಗಾ ವಿದ್ಯಾ ಸಂಸ್ಥೆಯಡಿ ಪ್ರಾಥಮಿಕದಿಂದ ಸ್ನಾತಕೋತ್ತರದವರೆಗೆ ೧೨೫ ಶಾಲಾ-ಕಾಲೇಜುಗಳು ಸ್ಥಾಪನೆಯಾಗಿ ಹೆಸರುವಾಸಿಯಾಗಿದ್ದು, ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ ರಾಜ್ಯದ ಪ್ರತಿಷ್ಠಿತ ತಾಂತ್ರಿಕ ಮಹಾವಿದ್ಯಾಲಯಗಳಲ್ಲಿ ಒಂದಾಗಿದೆ. ಮೆಡಿಕಲ್ ಕಾಲೇಜಿಗೆ ಕಳೆದ ವರ್ಷ ಜೂನಲ್ಲಿ ಅರ್ಜಿ ಸಲ್ಲಿಸಿದ್ದೆವು. ಅಗತ್ಯ ಪ್ರಕ್ರಿಯೆಗಳನ್ನು ಪೂರೈಸಿ ಸರಕಾರ ಅನುಮತಿ ನೀಡಿರುವುದು ಸಂತಸ ತಂದಿದೆ. ಗುಣಮಟ್ಟದ ಬೋಧನೆ, ಆರೋಗ್ಯಸೇವೆಯ ಕಲ್ಪನೆಯೊಂದಿಗೆ ಕಾಲೇಜನ್ನು ಬೆಳೆಸುವ ಗುರಿ ಹೊಂದಿದ್ದು, ಇದಕ್ಕೆ ಮಾರ್ಗದರ್ಶನ ಮಾಡಿದ, ಶ್ರಮಿಸಿದವರೆಲ್ಲರನ್ನು ಮಠ ಕೃತಜ್ಞತಾಪೂರ್ವಕವಾಗಿ ನೆನೆಯುತ್ತದೆ" ಎಂದರು. ಈ ಸಂದರ್ಭದಲ್ಲಿ ರಾಜೀವ್‌ಗಾಂಧಿ ಆರೋಗ್ಯ ವಿವಿ ವಿಶ್ರಾಂತ ಕುಲಪತಿ ಡಾ.ಸಚ್ಚಿದಾನಂದ, ರಾಜರಾಜೇಶ್ವರಿ ಮೆಡಿಕಲ್ ಕಾಲೇಜು ಪ್ರಿನ್ಸಿಪಾಲ್ ಡಾ.ನವೀನ್, ಮಣಿಪಾಲ್ ಗ್ರೂಪ್ ಆಫ್ ಹಾಸ್ಪಿಟಲ್‌ನ ಡಾ.ನಾಗೇಂದ್ರಸ್ವಾಮಿ, ಸಿದ್ಧಗಂಗಾ ಮಠದ ಆಡಳಿತಾಧಿಕಾರಿ ಎಸ್.ವಿಶ್ವನಾಥಯ್ಯ, ಕಾಲೇಜಿನ ಪ್ರಾಜೆಕ್ಟ್ ಇನ್ ಚಾರ್ಜ್ ಟಿ.ಎಂ.ಸ್ವಾಮಿ, ಹಿರಿಯ ಕೈಗಾರಿಕೋದ್ಯಮಿ ಎನ್.ಆರ್.ಜಗದೀಶ್, ಎಸ್‌ಐಟಿ ಸಿಇಓ ಡಾ.ಶಿವಕುಮಾರಯ್ಯ, ಆಡಿಟರ್ ವಿಶ್ವನಾಥ್, ಡಾ.ನಿರಂಜನ್, ಸಿದ್ಧಗಂಗಾ ಮೆಡಿಕಲ್ ಕಾಲೇಜು ಸಂಶೋಧನಾ ಆಸ್ಪತ್ರೆಯ ನಿರ್ದೇಶಕ ಡಾ.ಎಸ್.ಪರಮೇಶ್, ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿ, ಸಿದ್ಧಗಂಗಾ ಆಸ್ಪತ್ರೆ ಸೂಪರ್ ಸ್ಪೆಷಾಲಿಟಿ ವಿಭಾಗಗಳ ಮುಖ್ಯಸ್ಥ ಹಾಗೂ ಹಿರಿಯ ಹೃದ್ರೋಗ ತಜ್ಞ ಡಾ.ಭಾನುಪ್ರಕಾಶ್ ಮೊದಲಾದವರು ಉಪಸ್ಥಿತರಿದ್ದರು.

ಮೆಡಿಕಲ್ ಕಾಲೇಜು ಸ್ಥಾಪನೆಗೆ ರಾಜೀವ್‌ಗಾಂಧಿ ಆರೋಗ್ಯ ವಿವಿ ವಿಶ್ರಾಂತ ಕುಲಪತಿ ಡಾ.ಸಚ್ಚಿದಾನಂದ, ರಾಜರಾಜೇಶ್ವರಿ ಮೆಡಿಕಲ್ ಕಾಲೇಜು ಪ್ರಿನ್ಸಿಪಾಲ್ ಡಾ.ನವೀನ್, ಮಣಿಪಾಲ್ ಗ್ರೂಪ್ ಆಫ್ ಹಾಸ್ಪಿಟಲ್‌ನ ಡಾ.ನಾಗೇಂದ್ರಸ್ವಾಮಿ ಅಗತ್ಯ ಮಾರ್ಗದರ್ಶನ ಮಾಡಿರುವುದನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಲಾಯಿತು. ಮೆಡಿಕಲ್ ಕಾಲೇಜಿಗೆ ಪೂರಕವಾಗಿ ಬಿ.ಎಚ್.ರಸ್ತೆಯಲ್ಲಿ ೫೦೦ ಹಾಸಿಗೆ ಸಾಮರ್ಥ್ಯವುಳ್ಳ ಆಸ್ಪತ್ರೆ ಸ್ಥಾಪಿಸಿ ಗುಣಮಟ್ಟದ ವೈದ್ಯಕೀಯ ಸೇವೆ, ಆಹಾರವನ್ನು ಸಹ ಉಚಿತವಾಗಿ ನೀಡಲಾಗುವುದು. ಡಾ.ಎಸ್.ಪರಮೇಶ್, ಡಾ.ಶಾಲಿನಿ, ಡಾ.ಭಾನುಪ್ರಕಾಶ್ ಮತ್ತಿತರ ಪರಿಣಿತರು ಸಿದ್ಧಗಂಗಾ ವಿದ್ಯಾಸಂಸ್ಥೆ, ಮಠದ ಆಡಳಿತ ಮಂಡಳಿ ಮಾರ್ಗದರ್ಶನದಲ್ಲಿ ಕಾಲೇಜನ್ನು ಮುನ್ನಡೆಸಲಿದ್ದಾರೆ.

## ಶ್ರೀವಾಣಿ

### ದೇವರಿಲ್ಲ ಎನ್ನುವವನ ಬಾಯಲ್ಲಿಯೇ ದೇವರಿದ್ದಾನೆ.

ಒಂದು ಸಾರಿ ಆಸ್ತಿಕ ಮತ್ತು ನಾಸ್ತಿಕನ ನಡುವೆ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ತೀರ್ಪುಗಾರರು ಎರಡು ಕಡೆಯೂ ಇದ್ದರು. ದೇವರಿದ್ದಾನೆ ಎಂಬುದು ಆಸ್ತಿಕನ ವಾದ. ದೇವರಿಲ್ಲ ಎನ್ನುವುದು ನಾಸ್ತಿಕನ ವಾದ. ಇಬ್ಬರೂ ಯುಕ್ತಿಪೂರ್ವಕವಾಗಿ ವಾದ ಮಾಡುತ್ತಿದ್ದರು. ಅದರಲ್ಲಿಯೂ ನಾಸ್ತಿಕನ ವಾದ ಜೋರಾಗಿತ್ತು. ಮಾತುಮಾತಿಗೂ ದೇವರಿಲ್ಲ, ದೇವರಿಲ್ಲ ಎನ್ನುತ್ತಿದ್ದ. ಅವನ ಬಾಯಲ್ಲಿ ದೇವರು ಪದ ಮೊದಲು ಬರುತ್ತಿತ್ತು. ನಂತರ ಇಲ್ಲ ಎನ್ನುವ ಮಾತು ಬರುತ್ತಿತ್ತು. ಆ ನಾಸ್ತಿಕನು ದೇವರಿಲ್ಲ ಎಂದು ಪದೇ ಪದೇ ಹೇಳುತ್ತಿದ್ದುದನ್ನು ಕೇಳಿಕೇಳಿ ತೀರ್ಪುಗಾರರಿಗೆ ಸಂತೋಷವಾಯಿತು. ಆ ದೇವರು ಈ ದೇವರು ಎಂದು ಅಲೆಯುವ ಐರಾಣವೇ ತಪ್ಪಿತು ಎಂದರು. ಕೊನೆಗೆ ಆ ನಾಸ್ತಿಕನ ವಾದದ ವೈಖರಿಯನ್ನು ಕಂಡು 'ಇಷ್ಟೊಂದು ಚೆನ್ನಾಗಿ ಎಲ್ಲರೂ ತಲೆದೂಗುವ ಹಾಗೆ ವಾದ ಮಾಡುತ್ತೀಯಾ, ಈ ಶಕ್ತಿ ಯುಕ್ತಿ ನಿನಗೆ ಹೇಗೆ ಬಂತು' ಎಂದು ಕೇಳಿದರು. ಅದಕ್ಕೆ ಅವನು ತಾನು ನಾಸ್ತಿಕ ಅನ್ನುವುದನ್ನು ಮರೆತು 'ಎಲ್ಲಾ ಆ ದೇವರ ಕೃಪೆ' ಎಂದು ಬಿಟ್ಟ. ಆಗ ದೇವರಿಲ್ಲ ಎನ್ನುವವನ ಬಾಯಲ್ಲಿಯೇ ದೇವರು ಇದ್ದಾನೆ ಎಂಬುದು ಗೊತ್ತಾಯಿತು.







ಇತಿಹಾಸ

# ಸಿದ್ಧಗಂಗಾ : ಚಾರಿತ್ರಿಕ ಕಥನ

– ಕೋ.ರಂ. ಬಸವರಾಜು *

ಸಿದ್ಧಗಂಗೆಯ ಇತಿಹಾಸವನ್ನು ಉಲ್ಲೇಖಿಸುವಲ್ಲಿ ವಿರಕ್ತತೋಂಟದಾರ್ಯನ 'ಸಿದ್ಧೇಶ್ವರ ಪುರಾಣ' ಗುಬ್ಬಿಯ ಶಾಂತೇಶನ 'ಸಿದ್ಧೇಶ್ವರ ಪುರಾಣ', 'ನಿರಂಜನವಂಶರತ್ನಾಕರ' ಈ ಕಾವ್ಯಗಳ ಆಂತರಿಕ ಪ್ರಮಾಣಗಳು ಮುಖ್ಯಸಾಧನಗಳಾಗುತ್ತವೆ. ಅದರಂತೆ ಕ್ಷೇತ್ರದ ಮಹಿಮಾತಿಶಯವನ್ನು ಸಾರಲು ಯಲಹಂಕದ ಹೇರಂಬ ಕವಿಯ 'ಸಿದ್ಧಲಿಂಗೇಶ್ವರ ಸಾಂಗತ್ಯ' ಮತ್ತು ಸಿದ್ಧನಂಜೇಶನ ಗುರುರಾಜ ಚಾರಿತ್ರ ಕಾವ್ಯಗಳೂ ಮುಖ್ಯಪ್ರಮಾಣಗಳಾಗುತ್ತವೆ. ಈ ಪ್ರಮಾಣಗಳನ್ನಾಧರಿಸಿ ಸಿದ್ಧಗಂಗೆಯ ಇತಿಹಾಸವನ್ನು ಹೀಗೆ ನಿಗದಿಸಬಹುದು.

**೧. ಸಿದ್ಧೇನ – ಗೋಸಲಸಿದ್ಧೇಶ್ವರೇಣ ಉದ್ಭವಾ ಯಾ ಗಂಗಾ ಸಾ = ಸಿದ್ಧಗಂಗಾ**
**(ಗೋಸಲ ಸಿದ್ಧೇಶ್ವರರಿಂದ ಉದ್ಭವಿಸಿದ ಗಂಗೆ=ಸಿದ್ಧಗಂಗೆ)**

ಹರದನಹಳ್ಳಿಯ ಶೂನ್ಯಪರಂಪರೆಯ ೧೨ನೆಯ ಗುರುಗಳಾದ ಶ್ರೀ ಗೋಸಲಸಿದ್ಧೇಶ್ವರರು (ಕ್ರಿ.ಶ. ಸು. ೧೩೦೦-೧೩೫೦) ತಮ್ಮ ಶಿಷ್ಯರಾದ ಶ್ರೀ ಶಂಕರಾಚಾರ್ಯರೆಂಬುವರನ್ನು ಹರದನಹಳ್ಳಿಯ ಮುಂದಿನ ಪೀಠಾಚಾರ್ಯರನ್ನಾಗಿ ನೇಮಿಸಿ ಪೀಠಪರಂಪರೆಯ ಚರಜಂಗಮದ ನಡವಳಿಕೆಯಂತೆ ಧರ್ಮ ಜಾಗೃತಿಗಾಗಿ ೧೦೧ ಮಂದಿ ಹಿರಿಯ ಕಿರಿಯ ಶಿಷ್ಯರಾದ ವಿರತ ವಿರಕ್ತರೊಡಗೂಡಿ ದೇಶಸಂಚಾರಗೊಂಡು ಸಿದ್ಧಗಿರಿ (ಸಿದ್ಧಗಂಗಾಬೆಟ್ಟ) ಮತ್ತು ರಾಮಗಿರಿ (ರಾಮದೇವರಬೆಟ್ಟ) ಎಂಬ ಅವಳಿಬೆಟ್ಟದ ಪರಿಸರಕ್ಕೆ ಬರುತ್ತಾರೆ. ಈ ಪರಿಸರದ ಪ್ರಭಾವ ಮತ್ತು ಪ್ರಕೃತಿಯ ರಮ್ಯತೆಗೆ ಮನಸೋತು ಇದು ತಮ್ಮ ಲಿಂಗತಪೋನುಷ್ಠಾನಕ್ಕೆ ಅತ್ಯಂತ ಯೋಗ್ಯವಾದ ಸ್ಥಾನವೆಂದು ಪರಿಭಾವಿಸಿ ಇಲ್ಲಿಯೇ ನೆಲೆ ನಿಂತು ಚಿಕ್ಕಮಠವೊಂದನ್ನು ನಿರ್ಮಿಸಿಕೊಂಡು (ಈಗಿನ ಹಳೆಯಮಠ) ಅನುಷ್ಠಾನದಲ್ಲಿ ತೊಡಗಿದರು. ಅವರ ಶಿಷ್ಯರುಗಳು ಬೆಟ್ಟದಲ್ಲಿರುವ ಬೇರೆ ಬೇರೆ ಗುಹೆಗಳಲ್ಲಿ (ಅನೇಕ ಗುಹೆಗಳು ಇಂದಿಗೂ ಸುಸ್ಥಿತಿಯಲ್ಲಿವೆ) ತಪೋನುಷ್ಠಾನದಲ್ಲಿ ನಿಂತರು.

ಇಂಥ ಶಿಷ್ಯರ ಮಧ್ಯೆ ವಯೋವೃದ್ಧರಾದ ಶಿಷ್ಯರೊಬ್ಬರು ಈಗಿರುವ ಗಂಗಾದೇವಿಯ ಗುಹೆಯಲ್ಲಿ ಲಿಂಗತಪಸ್ಸಿನಲ್ಲಿ ತೊಡಗಿರುತ್ತಾರೆ. ಒಂದು ದಿನ ತಡರಾತ್ರಿಯಲ್ಲಿ ಅವರಿಗೆ ತೀವ್ರವಾದ ತೃಷೆಯುಂಟಾಯಿತು. ಬಾಯಾರಿಕೆಯಿಂದ ಬಳಲಿ ಬೆಂಡಾಗಿ ನಿತ್ರಾಣರಾದರು. ಗತಿ ಕಾಣದೆ ಗುರುವನ್ನು ನೆನೆನೆನೆದು 'ಓ ಸಿದ್ಧೇಶ್ವರಾ ಕಾಪಾಡು' ಎಂದು ಗಟ್ಟಿಯಾಗಿ ಕೂಗಿ ಕರೆದರು. ಆ ಶಿಷ್ಯನ ಆರ್ತ ಧ್ವನಿಯು ಗುರುವಿನ ಮಾತೃಸ್ವಭಾವ ಅಂತಃಕರಣಕ್ಕೆ ಕೇಳಿಸಿತು. ಕೂಡಲೇ ಗೋಸಲ ಸಿದ್ಧೇಶ್ವರರು ಒಬ್ಬ ಶಿಷ್ಯನೊಡನೆ ಮಠದಿಂದ ಸರಸರನೆ ಹೊರಟು ಬಂದರು. ಶಿಷ್ಯನ ನಿತ್ರಾಣತೆಯನ್ನು ಮನಗಂಡರು. ಮಠಕ್ಕೆ ಹೋಗಿ ಉದಕವನ್ನು ತರುವಂತೆ ಶಿಷ್ಯರಿಗೆ ಆದೇಶವಿತ್ತರು. ಆದರೆ ಅತ್ತ ಆ ಶಿಷ್ಯ ಬರುವುದು ತಡವಾಯಿತು. ಇತ್ತ ಈ ವೃದ್ಧ ಶಿಷ್ಯನ ತೃಷೆ ತೀವ್ರವಾಗಿ ಕಂಠಗತ ಪ್ರಾಣನಾದ. ಆಗ ಸಿದ್ಧೇಶ್ವರರು ಗಂಗಾಧರನನ್ನು ನೆನೆದು ಗುರುಗುಹೇಶ್ವರ ಅಲ್ಲಮನು ಗೊಗ್ಗಯ್ಯನ ತೋಟದಲ್ಲಿ ತನ್ನ ಹೆಬ್ಬರಳಿನಿಂದ ಮಿಟ್ಟೆಯನ್ನು (ಮಣ್ಣಿನ ಹೆಂಟೆಯನ್ನು) ಮೀಟಿದಂತೆ ತಮ್ಮ ಬಲಗಾಲಿನಿಂದ ಬಲವಾಗಿ ಬಂಡೆಯನ್ನು ಒತ್ತಿದರು. ಕೂಡಲೇ ಬಂಡೆಯನ್ನು ಸೀಳಿಕೊಂಡು ಗಂಗೆ ಚಿಮ್ಮನೆ ಚಿಮ್ಮಿದಳು. ಆ ಗಂಗೆ ಶಿವನ ಜಟೆಯಿಂದ ಭೂಮಿಗೆ ಅಧೋಮುಖವಾಗಿ ಧುಮ್ಮಿಕ್ಕಿದರೆ ಆ ಗಂಗೆಯೇ ಈ ಗಂಗೆಯಾಗಿ ಜಂಗಮದ ಪಾದದಿಂದ ಊರ್ಧ್ವಮುಖಿಯಾಗಿ ಚಿಮ್ಮಿಕ್ಕಿದಳು, ಪಾಪಿಗಳನ್ನು ಮೇಲಕ್ಕೊಯ್ಯುಳೋ ಎಂಬಂತೆ, ಆಗ ಆ ಉದ್ಭವವಾದ ಗಂಗೆಯಿಂದ ಆ ವೃದ್ಧ ಶಿಷ್ಯನಿಗೆ ಸ್ನಾನ ಮಾಡಿಸಿ, ವಿಭೂತಿಧಾರಣೆ ಮಾಡಿ ನಂತರ ಗಂಗೆಯನ್ನು ಪಾನ ಮಾಡಿಸಿದರು. ಅದರಿಂದ ಆತ ಶಕ್ತನಾದ, ಮುಕ್ತನಾದ. ಹೀಗೆ ಗೋಸಲ ಸಿದ್ಧೇಶ್ವರರಿಂದ ಗಂಗೆಯು ಉದ್ಭವವಾದರಿಂದ ಅಂದಿನಿಂದ ಈ ಕ್ಷೇತ್ರಕ್ಕೆ **ಸಿದ್ಧಗಂಗಾ** ಎಂಬ ಹೆಸರಾಯಿತು.

**೨. ಸಿದ್ಧೈಃ-ಗೋಸಲಪರಂಪರೈಃ ಜಂಗಮೈಃ ಸೇವಿತಾ ಗಂಗಾ=ಸಿದ್ಧಗಂಗಾ (ಗೋಸಲ ಪರಂಪರೆಯ ಜಂಗಮರಿಂದ ಸೇವಿಸಲ್ಪಟ್ಟ ಗಂಗೆ=ಸಿದ್ಧಗಂಗೆ)**

ಹೀಗೆ ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿತವಾದ ಈ ಸಿದ್ಧಗಂಗಾ ಕ್ಷೇತ್ರವನ್ನು ನಂತರದ ಅವರ ಶಿಷ್ಯರೆಲ್ಲರೂ (ದಿವ್ಯಲಿಂಗೇಶ್ವರರೊಬ್ಬರನ್ನು ಬಿಟ್ಟು) ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡು ಅನುಷ್ಠಾನಗೈದಿದ್ದಾರೆ. ಶ್ರೀ

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್', ಎಸ್.ಐ.ಟಿ. ಬಡಾವಣೆ, ತುಮಕೂರು.





ಗೋಸಲಸಿದ್ಧೇಶ್ವರರ ನಂತರ ಶ್ರೀ ಗೋಸಲ ಶಂಕರಾಚಾರ್ಯರು, ಶ್ರೀ ಗೋಸಲ ಚನ್ನಬಸವೇಶ್ವರರು, ಶ್ರೀ ತೋಂಟದ ಶ್ರೀ ಸಿದ್ಧಲಿಂಗೇಶ್ವರರು ಇವರುಗಳಿಂದ ಸಿದ್ಧಗಂಗಾಮಾತೆ ಸೇವಿತಳಾಗಿದ್ದಾಳೆ. ತತ್ರಾಪಿ ಈ ಕ್ಷೇತ್ರದಲ್ಲಿ ಹೆಚ್ಚುಕಾಲ ಅನುಷ್ಠಾನಗೈದು ಅನೇಕ ಪವಾಡಗಳನ್ನು ಮೆರೆದ ತೋಂಟದ ಶ್ರೀ ಸಿದ್ಧಲಿಂಗೇಶ್ವರರು ಈ ಕ್ಷೇತ್ರದ ಅಧಿದೈವವಾಗಿದ್ದಾರೆ. ಈವೊತ್ತಿಗೂ ಈ ಕ್ಷೇತ್ರದಲ್ಲಿ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಜಾತ್ರೋತ್ಸವಾದಿ ಎಲ್ಲಾ ಉತ್ಸವಗಳೂ ಶ್ರೀ ಸಿದ್ಧಲಿಂಗೇಶ್ವರರ ಪೂಜೋಪಚಾರ, ರಾಜೋಪಚಾರ ಮತ್ತು ಮೆರವಣಿಗೆಯೊಂದಿಗೆ ನಡೆಯುತ್ತವೆ.

**೩. ಸಿದ್ಧಿಂ=ಮುಕ್ತಿಂ ದದಾತಿ ಯಾ ಗಂಗಾ=ಸಿದ್ಧಗಂಗಾ** (ಸಿದ್ಧಿಯನ್ನು-ಇಷ್ಟಾರ್ಥವನ್ನು ಕೊಡುವ ಗಂಗೆ= ಸಿದ್ಧಗಂಗೆ) ನಾಡಿನ ಜನತೆ ಲೋಕಪಾವನೆಯಾದ ಶ್ರೀ ಸಿದ್ಧಗಂಗಾಮಾತೆಯನ್ನು ಸಂಪೂಜಿಸಿ ತಂತಮ್ಮ ಇಷ್ಟಾರ್ಥಗಳನ್ನು ಪಡೆದುಕೊಂಡಿದೆ. ಕೇವಲ ಕರ್ನಾಟಕದ ಜನತೆ ಮಾತ್ರವಲ್ಲ ನೆರೆಹೊರೆಯ ತಮಿಳಾಂಧ್ರ ಪ್ರದೇಶಗಳಿಂದಲೂ ಆರ್ತಭಕ್ತಜನತೆ ಬಂದು ಗಂಗಾಮಾತೆಯನ್ನು ಸೇವಿಸಿ ರೋಗರುಜಿನಗಳನ್ನು ಪರಿಹರಿಸಿಕೊಂಡಿದ್ದಾರೆ. ಹೇರಂಬ ಕವಿಯ ಸಿದ್ಧಲಿಂಗೇಶ್ವರ ಸಾಂಗತ್ಯ (ಸಂಧಿ-೧೯) ಹಾಗೂ ಸಿದ್ಧನಂಜೇಶನ ಗುರುರಾಜ ಚಾರಿತ್ರದಲ್ಲಿ (ಸಂಧಿ ೧೩) ಇದಕ್ಕೊಂದು ಜ್ವಲಂತ ಉದಾಹರಣೆಯನ್ನು ಉಲ್ಲೇಖಿಸಲಾಗಿದೆ.

ತಿಗುಳಾರಣ್ಯದ (ತಮಿಳುನಾಡಿನ) ವೀರಣಾರ್ಯನೆಂಬುವನು ವಿಷರೋಗ ಪೀಡಿತನಾಗಿದ್ದ. ಜನಜನಿತವಾಗಿದ್ದ ಸಿದ್ಧಗಂಗೆಯ ಮಹಿಮೆಯನ್ನು ಕರ್ಣಾಕರ್ಣಿ ಕೇಳಿದ ಆ ವೀರಣಾರ್ಯನು ಸಿದ್ಧಗಂಗೆಗೆ ಬರುತ್ತಾನೆ. ಬಂದವನೇ ಶ್ರೀಗುರು ಸಿದ್ಧಲಿಂಗೇಶ್ವರರನ್ನು ದರ್ಶನ ಮಾಡಿ 'ಮಹಾಗುರುವೆ! ಜನ್ಮಾಂತರಕರ್ಮವಿಪಾಕದಿಂದ ಪ್ರಾಪ್ತವಾದ ಈ ನನ್ನ ಕುಷ್ಟರೋಗವನ್ನು ಪರಿಹರಿಸಿ ನನ್ನನ್ನು ಉದ್ಧರಿಸು ತಂದೆ' ಎಂಬುದಾಗಿ ಪ್ರಾರ್ಥಿಸುತ್ತಾ ದೀರ್ಘದಂಡದಂತೆ ನಮಸ್ಕರಿಸುತ್ತಾನೆ. ಆಗ ಸಿದ್ಧಲಿಂಗೇಶ್ವರರು ಕ್ಷಣಹೊತ್ತು ಆತನ ಮೇಲೆ ಕಾರುಣ್ಯ ದೃಷ್ಟಿಹರಿಸಿ 'ಬೆಟ್ಟದ ಮೇಲೆ ಹೋಗಿ ಗಂಗಾಸ್ನಾನ ಮಾಡಿ (ನೀರನ್ನು ಹಾಕಿಸಿಕೊಂಡು) ಗಂಗಾಪಾನ ಮಾಡಿ ಪೂಜೆ ಮಾಡಿಸಿ ನಮಸ್ಕಾರ ಹಾಕು. ನಿನ್ನ ರೋಗವೆಲ್ಲಾ ಪರಿಹಾರವಾಗುವುದು' ಎಂದು ಹೇಳುತ್ತಾರೆ. ಗುರುವಾಣಿಯಂತೆ ಆತ ಗಂಗಾಸ್ನಾನ ಪಾನಗಳನ್ನು ಮಾಡಿ ಗಂಗಾಮಾತೆಗೆ ದೀರ್ಘದಂಡ ನಮಸ್ಕಾರ ಹಾಕುವನು. ಕೂಡಲೇ ಅವನ ರೋಗವೆಲ್ಲಾ ಪರಿಹಾರವಾಗಿ ಶೋಭಾಯುಕ್ತ ಶರೀರಿಯಾಗುವನು. ನಂತರ ತನ್ನ ರೋಗವಿಮುಕ್ತಿಗೆ ಕಾರಣನಾದ ಗುರುವನ್ನು ಅನನ್ಯ ಭಕ್ತಿಯಿಂದ ತನ್ನ ಮಾತೃಭಾಷೆಯಾದ ತಮಿಳಿನಲ್ಲಿ ಸ್ತೋತ್ರ ಮಾಡುವನು. ಆದರೆ ಅದು ಅಕ್ಕಪಕ್ಕದಲ್ಲಿದ್ದವರಿಗೆ ಅರ್ಥವಾಗಲಿಲ್ಲ. ಆಗ ಅವರೆಲ್ಲರೂ ಸಿದ್ಧಲಿಂಗೇಶ್ವರರನ್ನು ಕುರಿತು 'ಕನ್ನಡದಲ್ಲಿ ಸ್ತುತಿಸುವಂತೆ ಅನುಗ್ರಹಿಸಿ' ಎಂದು ಪ್ರಾರ್ಥಿಸುವರು. ಅದರಂತೆ ಆ ವೀರಣಾರ್ಯ ಕನ್ನಡಲ್ಲಿಯೇ ಸ್ತುತಿಸುವನು.

**೪. ಸಿದ್ಧಾ-ಲೋಕಪ್ರಸಿದ್ಧಾ ಯಾ ಗಂಗಾ= ಸಿದ್ಧಗಂಗಾ (ಲೋಕಪ್ರಸಿದ್ಧವಾದ ಗಂಗೆಯೇ ಸಿದ್ಧಗಂಗೆ)**

ಶ್ರೀ ಸಿದ್ಧಲಿಂಗೇಶ್ವರರ ಕಾಲಕ್ಕಾಗಲೇ (ಸು. ಕ್ರಿ.ಶ. ೧೪೦೦-೧೪೮೦) ಸಿದ್ಧಗಂಗೆಯ ಕೀರ್ತಿ ಕರ್ನಾಟಕದಾದ್ಯಂತ ಮಾತ್ರವಲ್ಲ ತಮಿಳುನಾಡಿನವರಿಗೂ ಹಬ್ಬಿತ್ತು. ಕೇವಲ ಭವರೋಗ ಹಾಗೂ ದೇಹಸಂಬಂಧ ರೋಗಗಳು ಮಾತ್ರವಲ್ಲ, ಜೊತೆಗೆ ಗಂಗಾಸ್ನಾನ ಮಾಡಿ ಗಂಗೆಪೂಜೆ ಮಾಡಿದರೆ ಸಂತಾನಭಾಗ್ಯವಾಗುವುದೆಂಬ ಮಹಿಮೆಯೂ ಜನಜನಿತವಾಗಿತ್ತು. ಅದರಂತೆ ಅದೆಷ್ಟೋ ಮಂದಿ ಈ ಪ್ರಾಂತ್ಯದ ಮಕ್ಕಳಿಲ್ಲದವರು ಸಪರಿವಾರ ಸಹಿತವಾಗಿ ಬಂದು ಗಂಗೆಪೂಜೆ ಮಾಡಿ ಸಂತಾನಭಾಗ್ಯವನ್ನು ಪಡೆದು ಸುಖಿಗಳಾಗಿದ್ದಾರೆ. ವಂಶಪಾರಂಪರ್ಯವಾಗಿ ಮನೆ ದೇವತೆಯನ್ನಾಗಿ ಮಾಡಿಕೊಂಡಿದ್ದಾರೆ. ಈ ಪ್ರಾಂತ್ಯದಲ್ಲಿ ಪ್ರತಿಯೊಂದು ಮನೆಯಲ್ಲಿಯೂ ಗಂಡುಮಕ್ಕಳಿಗೆ ಸಿದ್ಧಗಂಗಪ್ಪ ಎಂದೂ; ಹೆಣ್ಣುಮಕ್ಕಳಿಗೆ ಸಿದ್ಧಗಂಗಮ್ಮ ಎಂದು ಹೆಸರಿಟ್ಟು ಕರೆಯುತ್ತಿದ್ದುದು ಇದಕ್ಕೆ ಜೀವಂತ ಉದಾಹರಣೆಯಾಗಿದೆ. ಇದು ಸಿದ್ಧಗಂಗೆಯ ಹೆಸರಿನ ಐತಿಹ್ಯ ಕಥನ.

**ಶ್ರೀವಾಣಿ**

ನಮ್ಮೀ ಭರತಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಹ್ಮಚರ್ಯ ರಕ್ಷಣೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದರು. ಪರಾ, ಅಪರಾ ಎಂಬ ಎರಡು ಪವಿತ್ರವಾದ ನಿಧಿಗಳು ಬ್ರಹ್ಮಚಾರಿಯಿಂದ ರಕ್ಷಣೆ ಮಾಡಲ್ಪಡುತ್ತದೆ. ಬ್ರಹ್ಮಚರ್ಯೆಯಿಂದ ಬ್ರಹ್ಮಜ್ಞಾನ ಪಡೆದ ತಪಸ್ವಿಯು ಇವುಗಳನ್ನು ಸ್ವಾಧೀನಮಾಡಿಕೊಳ್ಳುತ್ತಾನೆ.





**ಚಿಂತನೆ**

# ಸಹವಾಸ

– ನಾಡೋಜ ಡಾ. ಗೊ.ರು. ಚನ್ನಬಸಪ್ಪ *

**"ಉದಯ ಮಧ್ಯಾಹ್ನ ಅಸ್ತಮಯ ಕತ್ತಲೆ ಬೆಳಗು ದಿನ ವಾರ ಲಗ್ನ ತಿಥಿ ಮಾನ ಸಂವತ್ಸರ ಹೋಗುತ್ತೆ ಬರುತ್ತವೆ. ಇದ ನೋಡಿದವರೆಲ್ಲ ಇದರೊಳಗೆ ಹೋಗುತ್ತ ಬರುತ್ತ ಇದ್ದಾರೆ. ಜಗಕ್ಕೆ ಇದೀಗ ಇಷ್ಟವಾಗಿಪ್ಪವು. ಎನ್ನ ದೇವಂಗೆ ಇವೊಂದೂ ಇಲ್ಲ. ದಿನ-ಕಾಲ, ಯುಗ-ಜುಗ ಪ್ರಳಯಕ್ಕೆ ಹೊರಗಾದ ದೇವನ ಅಂಗವಿಸಿ ಮುಟ್ಟಿ ಹಿಡಿದ ಕಾರಣ ಎಮ್ಮ ಶರಣರು ಪ್ರಳಯಕ್ಕೆ ಹೊರಗಾದರು. ಇದನರಿದು ಅಂತಪ್ಪ ಶರಣರ ನಂಬಿ ಕೆಟ್ಟು ಬಟ್ಟ ಬಯಲಾದನಯ್ಯಾ ಬಸವಪ್ರಿಯ ಕೂಡಲ ಚೆನ್ನಬಸವಣ್ಣ."**

ಇದು ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ, ಆದರೆ ವಚನ ಸಾಹಿತ್ಯ ರೂಪದಲ್ಲಿ ಇನ್ನೂ ಜೀವಂತವಾಗಿರುವ ಶರಣ ಹಡಪದಪ್ಪಣ್ಣನ ಅನುಭಾವದ ನುಡಿ. ಸಜ್ಜನಸಂಗ ಅಥವಾ ಶರಣ ಗೋಷ್ಠಿಯ ಪ್ರಭಾವದಿಂದ ಸಾಮಾನ್ಯ ವ್ಯಕ್ತಿಯೂ ಹೇಗೆ ಶ್ರೇಷ್ಠ ಶಕ್ತಿಯಾಗಬಲ್ಲ ಎಂಬುದಕ್ಕೆ ಹಿಡಿದ ಕನ್ನಡಿಯಂತಿದೆ ಈ ವಚನ. ಹಡಪದಪ್ಪಣ್ಣ ಸಮಾಜದ ಸಾಮಾನ್ಯ ದೃಷ್ಟಿಯಲ್ಲಿ ಓರ್ವ ಕ್ಷೌರಿಕ. ಅವನದು ಹೊಟ್ಟೆಯಪಾಡಿನ ಕಾಯಕ. ಆದರೆ ಶರಣರ ಸಹಯೋಗ ಅವನನ್ನು ಹಿರಿಯ ಅನುಭಾವಿಗಳ ಸಾಲಿಗೆ ಸೇರಿಸಿದೆ. ಬೆಂಕಿಯ ಸಂಗದಿಂದ ಕಟ್ಟಿಗೆ ಸುಟ್ಟು ಹೋಗುತ್ತದೆ. ಬೆಳಗಿನ ಸಂಪರ್ಕದಿಂದ ಕತ್ತಲೆಯ ಹುಟ್ಟಡಗುತ್ತದೆ. ಅಂತೇ ಸತ್ಸಹವಾದ ಅಥವಾ ಸಜ್ಜನ ಸಂಗದಿಂದ ನಡೆ ನುಡಿಗಳು ಶುದ್ಧವಾಗುತ್ತವೆ; ಸಂಸ್ಕಾರಗೊಳ್ಳುತ್ತವೆ. ಏಕೆಂದರೆ, ಸಜ್ಜನರಿಗೆ ಅಥವಾ ಶರಣರಿಗೆ ಅಂಗದ ಕಳವಳವಿರುವುದಿಲ್ಲ. ಮನಸ್ಸಿನಲ್ಲಿ ಚಾಂಚಲ್ಯವಿರುವುದಿಲ್ಲ. ಭಾವದ ಭ್ರಾಂತಿಯಾಗಲೀ, ಅರುಹಿನ ಮರಹಾಗಲೀ ಅವರ ಬಳಿ ಸುಳಿಯುವುದಿಲ್ಲ.

ಸಜ್ಜನರ ವಿಚಾರ ಅಭಿನ್ನವಾದದ್ದು; ಸ್ಥಾನಮಾನಗಳ ಬಗ್ಗೆ ಅವರಿಗೆ ಲಕ್ಷ್ಯವಿರುವುದಿಲ್ಲ. ಅವರು ಇಹ-ಪರಗಳ ಚಿಂತೆ ಮಾಡುವುದಿಲ್ಲ. ಇಂದ್ರಿಯಗಳ ಇಚ್ಛೆ, ತಾಪತ್ರಯಗಳ ಬಂಧನ – ಇವುಗಳಿಗೆ ಸಿಲುಕದ ಸಹಜಯೋಗ ಅವರದು. ಅವರ ಸಹಯೋಗ ಪರಿಶುದ್ಧ ವಾಯುಸೇವನೆಯಷ್ಟೇ ಆಹ್ಲಾದಕಾರಿ. ಸಮಾಜದಲ್ಲಿ ನಮ್ಮ ಸ್ಥಾನಮಾನಗಳು ನಿಗದಿಯಾಗುವುದು ಬಹುಮಟ್ಟಿಗೆ ನಮ್ಮ ಸಂಗ – ಸಹವಾಸಗಳಿಂದ. ಮನುಷ್ಯ ಸಂಘಜೀವಿ. ಸ್ವಭಾವತಃ ಒಂಟಿತನ ಅವನಿಗೆ ಇಷ್ಟವಾಗದ ಸ್ಥಿತಿ. ಆದುದರಿಂದಲೇ ಅವನು ಮನೆಯ ಒಳಗಿರಲಿ, ಹೊರಗಿರಲಿ ಸಹವಾಸ ಬಯಸುತ್ತಾನೆ. ಮನೆಯಲ್ಲಿ ತಾಯಿ-ತಂದೆಗಳೋ, ಅಣ್ಣ-ತಮ್ಮಂದಿರೋ, ಹೆಂಡಿರು-ಮಕ್ಕಳೋ ಜೊತೆಗಿದ್ದರೆ, ಮನೆಯ ಹೊರಗೆ ಬಂಧು ಬಳಗವೋ, ಇಷ್ಟ ಮಿತ್ರರೋ ಇರಬೇಕು. ಸಹಜವಾಸವಿಲ್ಲದಿದ್ದರೆ ಬದುಕು ನೀರಸವಾಗುತ್ತದೆ ಮಾತ್ರವಲ್ಲ, ನಿರರ್ಥಕವೂ ಆಗುತ್ತದೆ.

ವಾಸ್ತವವಾಗಿ, ನಮ್ಮ ಬದುಕು ಸಾರ್ಥಕಗೊಳ್ಳುವುದೇ ಸಂಘ ಜೀವನದಿಂದ. ಆದರೆ ಆ ಸಂಗ ಅಥವಾ ಸಹವಾಸ ಎಂತಹುದಿರಬೇಕು? ಅದೇ ಅನುಭಾವಿಗಳು ಹೇಳುವ ಸಜ್ಜನರ ಸಂಗ. ಅದು ಹೊರತಾಗಿ ದುರಾಚಾರಿಗಳು, ಸುರಾಪಾನಿಗಳು, ಚಾರಚೋರರು – ಇಂತಹ ದುರ್ಜನರ ಸಹವಾಸ ಮಾಡಿದರೆ ಪರಿಣಾಮವೇನೆಂದು ಬೇರೆ ಹೇಳಬೇಕಾಗಿಲ್ಲ. ದುರ್ಜನರ ನಡೆ-ನುಡಿಗಳು ಭಿನ್ನ. ಅವರ ಮೈ ಮನಗಳು ಭಿನ್ನ. ಅವರು ತಮ್ಮ ಸಂಪರ್ಕಕ್ಕೆ ಬಂದವರನ್ನು ಸೋಗು ಹಾಕಿ ಸುಲಿಯುತ್ತಾರೆ, ಬೆದರಿಕೆ ಹಾಕಿ ಬೆತ್ತಲೆ ಮಾಡುತ್ತಾರೆ. ಒಮ್ಮೆ ಅವರ ಸಂಘಕ್ಕೆ ಸಿಕ್ಕಿದೆವೆಂದರೆ ನಾವು ಭಯ ಮತ್ತು ಹಿಂಸೆಗಳ ಹುತ್ತವಾಗಿ ಬಿಡುತ್ತೇವೆ. ಸಭ್ಯತೆ ಸಜ್ಜನಿಕೆಗಳು ನಮ್ಮಿಂದ ದೂರವಾಗಿ ಬಿಡುತ್ತವೆ. ಮಾನವೀಯತೆಯ ಅಂತಃಕರಣವೇ ಮಾಯವಾಗಿ ಬಿಡುತ್ತದೆ, ಮೃಗ ಲಕ್ಷಣಗಳೆಲ್ಲ ಮೈಗೂಡಿಕೊಳ್ಳುತ್ತವೆ.

ಆದುದರಿಂದ ಸಹವಾಸ ಅಥವಾ ಸಂಗ ವ್ಯಕ್ತಿಯ ಅಪೇಕ್ಷೆಯಷ್ಟೇ ಆದರೆ ಸಾಲದು; ಆಯ್ಕೆಯೂ ಆಗಬೇಕು. ಮನ, ಬುದ್ಧಿ, ಶೀಲ, ಭಾವಗಳಲ್ಲಿ ಸಮರಸವಾಗುವಂತಹ ವ್ಯಕ್ತಿಗಳ ಸಂಗವನ್ನೇ ಮಾಡಬೇಕು. ಅಂತರಂಗ ಶುದ್ಧವಿಲ್ಲದವರ ಸಂಗ ಸಂಕಟದ ನಂಜು; ದುರ್ಜನರ ಸಂಗ ದೋಷದ ದುಳ್ಳುರಿ. 'ನೆರೆ ನೋಡಿ ನೆಂಟಸ್ತಿಕೆ ಮಾಡು' ಎಂಬ ಗಾದೆ ಮಾತೇ ಇದೆ. ನಮ್ಮ ಘನತೆ ಗೌರವಗಳು ಮತ್ತು ಸ್ಥಾನಮಾನಗಳಿಗೆ ನಮ್ಮ ಸಹವಾಸವೂ ಒಂದು ಆಳತೆಗೋಲೆಂಬುದನ್ನು ಮರೆಯಬಾರದು. ನಾವು ನಿತ್ಯರ ಸಂಗ ಮಾಡಬೇಕು; ಸತ್ಯದ ಸಹವಾಸ ನಮಗೆ ಬೇಕು. ನಮ್ಮ ಸಹಯೋಗ ಸದ್ವಿಚಾರಿಗಳೊಡನೆ, ಸದಾಚಾರಿಗಳೊಡನೆ ಇರಬೇಕು. ಅಂತಹ ಸಹಯೋಗದಿಂದ ನಾವೂ ನಿತ್ಯವಾಗುತ್ತೇವೆ; ಸತ್ಯವಾಗುತ್ತೇವೆ; ನಮ್ಮದೂ ಸದ್ವಿಚಾರವಾಗುತ್ತದೆ; ನಮ್ಮ ನಡೆಯೂ ಸದಾಚಾರವಾಗುತ್ತದೆ. ದುರ್ಜನರ ಸಹವಾಸ ನಮ್ಮನ್ನು ದುಃಖದ ಮಡಿಲಿಗೆ ತಳ್ಳಿದರೆ, ಸಜ್ಜನರ ಸಹವಾಸ ಸಂತೋಷದ ಸುಳಿಗಾಳಿಯಲ್ಲಿ ನಲಿದಾಡಿಸುತ್ತದೆ.

* # ೪೦೬, 'ಪ್ರಣಾಮ', ೩ನೇ ಕ್ರಾಸ್, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಶಿಪ್
೨ನೇ ಹಂತ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦೦೯೮





ಪ್ರಚಲಿತ

# ಅನ್ನವೇ ದೇವರು

– ಪಂಡಿತ ಚನ್ನಪ್ಪ ಎರೆಸೀಮೆ

ಪ್ರಾಚೀನ ಭಾರತದ ಅರ್ಥಶಾಸ್ತ್ರಜ್ಞ ಚಾಣಿಕ್ಯ – "ಸುಖಸ್ಯ ಮೂಲಂ ಧರ್ಮಃ; ಧರ್ಮಸ್ಯ ಮೂಲಮರ್ಥಃ; ಅರ್ಥಸ್ಯಮೂಲಂ ರಾಜ್ಯಂ" – ಎಂದಿದ್ದಾನೆ. ಇದರ ಅರ್ಥವಿಷ್ಟು : ಮನುಷ್ಯನಿಗೆ ಸುಖದ ಕಲ್ಪನೆಯುಂಟಾಗುವುದು ವ್ಯವಸ್ಥಿತವಾದ ಧರ್ಮಬುದ್ಧಿಯಿಂದ; ಧರ್ಮಬುದ್ಧಿ ಚಿಗುರಲು ಅರ್ಥ ವ್ಯವಸ್ಥೆ ಸರಿಯಾಗಿರಬೇಕು; ಅರ್ಥ ವ್ಯವಸ್ಥೆಗೆ ಸುವ್ಯವಸ್ಥಿತ ರಾಜಸತ್ತೆ ತಮ್ಮದಾಗಿರಬೇಕು – ಇತ್ಯಾದಿ.

ಇಲ್ಲಿ 'ಅರ್ಥ' ಎಂಬುದಕ್ಕೆ 'ಧ್ಯಾನ್ಯಸಮೃದ್ಧಿ' ಎಂಬುದನ್ನು 'ನಹಿ ಧಾನ್ಯ ಸಮೋಹ್ಯರ್ಥಃ' ಎಂದಿದ್ದಾನೆ. ಧಾನ್ಯ ಸಮೃದ್ಧಿ ಇಲ್ಲದಿದ್ದಾಗ ಹಸಿದ ಜನ ರಾಕ್ಷಸರಾಗಿ ಹಾಹಾಕಾರ, ಪ್ರಕ್ಷೋಭೆಗೊಂಡು ರಾಜ್ಯ ವ್ಯವಸ್ಥೆಗೇ ವೈರಿಗಳಾಗಿ ಬಿಡುತ್ತಾರೆಂದು 'ನ ಕ್ಷುಧಾ ಸಮಶ್ಶತ್ರುಃ' ಎಂಬ ಇನ್ನೊಂದು ಸೂತ್ರದಿಂದ ತಿಳಿಸುತ್ತಾನೆ. ಹಸಿವಿನ ಬಾಧೆಯೇ ದೇಶಕ್ಕೆ ಶತ್ರು. ಆದ್ದರಿಂದ ಯಾವ ಸರ್ಕಾರವೇ ಆಗಿರಲಿ ಧಾನ್ಯ ಸಮೃದ್ಧಿಯ ಅರ್ಥ ವ್ಯವಸ್ಥೆಯಿಂದ ತನ್ನ ಜನಾಂಗದ ಕ್ಷುತ್ಪಿಪಾಸೆಯನ್ನು ಹೊಡೆದೋಡಿಸಬೇಕು. ಈ ಧಾನ್ಯ ಸಂಪತ್ತನ್ನು ಹಿಂಬಾಲಿಸಿ ಎಲ್ಲ ಸಂಪತ್ತುಗಳೂ ಬರುತ್ತವೆ. ಪಶು-ಪಕ್ಷಿ-ಕ್ರಿಮಿ-ಕೀಟಗಳ ಅನ್ನಸಂಪತ್ತೂ ಅಧಿಕಗೊಳ್ಳುತ್ತದೆ. ಗೋಸಂಪತ್ತು-ಗವ್ಯಸಂಪತ್ತು ವೃದ್ಧಿಗೊಂಡು ದೇಹದಾರ್ಢ್ಯದ ಜನಸಂಪತ್ತೂ ರೂಪುಗೊಳ್ಳುತ್ತದೆಂದು ಅವನ ಅಭಿಪ್ರಾಯ. ಈ ಅಭಿಪ್ರಾಯವನ್ನು ಯೋಚಿಸಿದಷ್ಟೂ ಅದರ ಅರ್ಥದ ಹರವು ವಿಸ್ತಾರಗೊಳ್ಳುತ್ತದೆ. 'ಅನ್ನಂ ಬ್ರಹ್ಮೇತಿ ವ್ಯಜಾನಾತ್' – ಎಂದೇ ವೇದ ಋಷಿಯ ಸಂದೇಶ.

ಹಸಿದ ಮನುಷ್ಯನಿಗೆ ಅನ್ನವೇ ದೇವರು. ಅದರ ಕೊರತೆಯಾದಾಗ ಅವನ ವಿವೇಕ ನಷ್ಟವಾಗಿ ದುರ್ಬುದ್ಧಿ ಉದ್ಭವಗೊಳ್ಳುತ್ತದೆ. ಪಾಪ ಬುದ್ಧಿಯಿಂದ ಏನನ್ನಾದರೂ ಮಾಡಲು ಸಿದ್ಧನಾಗುತ್ತಾನೆ. ಸಾಮಾಜಿಕ ಅನಿಷ್ಟಗಳಿಗೆಲ್ಲ ಅನ್ನದ ಕೊರತೆಯೇ ಪ್ರಮುಖ ಕಾರಣವಾಗಿ ರಾಜ್ಯ ವ್ಯವಸ್ಥೆಯಲ್ಲಿ ಅಶಾಂತಿ ಹೆಚ್ಚುತ್ತದೆ. ಅದೇ ಮುಂದೆ ಮಹಾಕ್ರಾಂತಿಯಾಗಿ ಪರಿಣಮಿಸಿ ಮಹಾಕ್ಷೋಭೆಗೆ ಮೂಲ ಕಾರಣವಾಗುತ್ತದೆ. ಇಂಥ ಸಮಯದಲ್ಲಿಯೇ ರಾಜ್ಯ ವ್ಯವಸ್ಥೆ ಅನ್ಯರ ಹಿಡಿತಕ್ಕೊಳಪಡುವ ಅಪಾಯವೂ ಕೂಡ ಉಂಟು. ಆದ್ದರಿಂದ ಅನ್ನವೇ ದೇವರು. ಈ ದೇವರು ಪ್ರತ್ಯಕ್ಷವಾದರೆ ಉಳಿದ ಎಲ್ಲ ಸಂಪತ್ತನ್ನೂ ಅವನು ಎಳೆತರುತ್ತಾನೆ.

ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ?... "ಲೋಕಕ್ಕೆ ಅನ್ನವೇ ದೈವ ಸರ್ವಜ್ಞ" ಇತ್ಯಾದಿ ಸರ್ವಜ್ಞ ಕವಿಯ ಮಾತುಗಳನ್ನು ಸ್ಮರಿಸಬಹುದು. ಅನ್ನವೇ ಇಲ್ಲದೆ ಉಳಿದ ಯಾವ ಐಶ್ವರ್ಯ ಎಷ್ಟಿದ್ದರೂ ಎಲ್ಲವೂ ವ್ಯರ್ಥವೇ ಅಲ್ಲವೆ?

ಒಮ್ಮೆ ಓರ್ವ ಶ್ರೀಮಂತ ತನ್ನ ಮನೆಗೆ ಊಟಕ್ಕೆ ಅನೇಕ ಗಣ್ಯರನ್ನು ಆಹ್ವಾನಿಸಿದ. ಗೊತ್ತಾದ ವೇಳೆಗೆ ಅವರೆಲ್ಲ ಬಂದರು. ಅವರೆಲ್ಲ ಬರುವ ಹೊತ್ತಿಗೆ ಶ್ರೀಮಂತ ತನ್ನ ಮನೆಯಂಗಳದಲ್ಲಿ ಆಳುಗಳ ಅಚಾತುರ್ಯದಿಂದ ಅಕ್ಕಿ ಬೇಳೆಯಂಥ ಧಾನ್ಯಗಳು ಬಿದ್ದಿರುವುದನ್ನು ಗಮನಿಸಿ ಅವನ್ನು ಆರಿಸಿ ತನ್ನ ಮಡಿಲಿನಲ್ಲಿ ಕಟ್ಟಿಕೊಳ್ಳುತ್ತಿದ್ದ. ಬಂದ ಪ್ರತಿಷ್ಠಿತ ಜನರೆಲ್ಲ "ಏನು ಸಾಹುಕಾರರೇ, ದೇವರು ನಿಮಗೆ ಅಪಾರ ಐಶ್ವರ್ಯ ಕೊಟ್ಟಿದ್ದರೂ ಅದನ್ನು ಅನುಭವಿಸದೆ ಇನ್ನೂ ಈ ಉಂಛಾವೃತ್ತಿಯಲ್ಲೇ ಇದ್ದೀರಲ್ಲಾ" – ಎಂದು ಚೇಷ್ಟೆ ಮಾಡಿ ನಕ್ಕುಬಿಟ್ಟರು. ಸಾಹುಕಾರ ಏನೂ ಮಾತಾಡಲಿಲ್ಲ. ಇದನ್ನೊಂದು ಅಪಮಾನವೆಂದೂ ಭಾವಿಸಲಿಲ್ಲ.

ಅವರನ್ನೆಲ್ಲ ಆದರಿಸಿ ಕರೆದೊಯ್ದು ಊಟಕ್ಕೆ ಕುಳ್ಳಿರಿಸಿ, ಎಲ್ಲರಿಗೂ ಊಟಕ್ಕೆ ಬಂಗಾರದ ತಟ್ಟೆ ಲೋಟ ಇಟ್ಟು, ಎಲ್ಲರ ತಟ್ಟೆಗಳಿಗೂ ಬೊಗಸೆಯಿಂದ ಮುತ್ತು ರತ್ನ-ವಜ್ರ-ವೈಡೂರ್ಯ-ಬಂಗಾರ-ಬೆಳ್ಳಿ ಮೊದಲಾದ ಕೋಟಿ ಕೋಟಿ ರೂಪಾಯಿ ಬೆಲೆಯ ವಸ್ತುಗಳನ್ನು ಬಡಿಸಿ ಸಾಷ್ಟಾಂಗ ನಮಸ್ಕಾರ ಹಾಕಿ ಊಟ ಮಾಡಬಹುದೆಂದು ಬೇಡಿಕೊಂಡ. ಸಾಹುಕಾರನ ಮನೆಯ ಮೃಷ್ಟಾನ್ನ ಭೋಜನದ ಆಸೆಯಿಂದ ಮನೆಯಲ್ಲಿ ತಿಂಡಿಯನ್ನು ತಿನ್ನದೆ ಹಸಿವೆಯಿಂದ ಕಂಗಾಲಾಗಿ ಬಂದಿದ್ದ ಜನ ಒಬ್ಬರ ಮುಖವನ್ನೊಬ್ಬರು ನೋಡುತ್ತ ಕೊನೆಗೆ ಸಾಹುಕಾರರಲ್ಲಿ ಕ್ಷಮೆ ಕೇಳಬೇಕಾಯಿತು. ಮಹಾಶರಣ ದೇವರ ದಾಸಿಮಾರ್ಯರು –

**ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದೊಡೆ ವಿಷವೇರಿತ್ತಯ್ಯ ಅಪಾದಮಸ್ತಕಕ್ಕೆ**
**ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ ವಸುಧೆಯೊಳಗಾತನೇ ಗಾರುಡಿಗ ಕಾಣಾ ರಾಮನಾಥ !**

ಎಂದು ಹೇಳಿರುವ ಮಾತನ್ನು ಸರಕಾರದ ಸೂತ್ರವಿಡಿದವರು ಮನವಿಟ್ಟು ಗಮನಿಸುವುದು ಉಚಿತವೆನಿಸುತ್ತದೆ.





ಲೇಖನ

# ಭಕ್ತಿಯ ಸಾರ್ಥಕತೆ

– ಯೋಗೀಶ್ ನಿರ್ವಿಕಲ್ಪ *

'ಭಕ್ತಿ ಎಂಬುದು ಅಂತರಂಗದೊಳಗೆ ನಡೆಯುವ ಒಂದು ಪ್ರಕ್ರಿಯೆ. ಅದು ಭಕ್ತ ಮತ್ತು ಪರಮಾತ್ಮರ ನಡುವಿನ ಅವಿನಾಭಾವ ಸಂಬಂಧಕ್ಕೊಂದು ಸಾಕ್ಷಿ! ಅವರಿಬ್ಬರ ನಡುವಿನ ಮಧುರಪೂರ್ಣ ಸಂಭಾಷಣೆಯು ಅವರಿಬ್ಬರಿಗೇ ಅದು ಸೀಮಿತ. ಭಕ್ತಿ ಎಂದಿಗೂ ಡಾಂಭಿಕತನದ ಬಾಹ್ಯ ಆಚರಣೆಯ ತೋರ್ಪಡಿಕೆಯ ಜಡ ಕ್ರಿಯೆ ಅಲ್ಲ. ನಿಜಭಕ್ತಿ ವ್ಯಕ್ತವಾಗುವುದು ಅಥವಾ ಸ್ಪಂದಿಸುವುದು ಹೃದಯ ಅಂತರಾಳದಲ್ಲಿಯೇ ವಿನಾಃ ಬಹಿರಂಗದಲ್ಲಿ ಅಲ್ಲ ಎಂಬುದನ್ನು ಭಕ್ತ ಮೊದಲು ಮನಗಾಣಬೇಕು. ನಿಜ ಭಕ್ತಿಯ ಅರಿವು ಭಕ್ತನ ಹೃದಯಕ್ಕೆ ಮಾತ್ರ ಅದು ವೇದ್ಯವಾದ ಸಂಗತಿ' ಎಂದು ಭಕ್ತಿಯನ್ನು ಅತ್ಯಂತ ವೈಚಾರಿಕಪೂರ್ಣವಾಗಿ ಚಿಂತಿಸಿದವರು ದಾರ್ಶನಿಕ ಶ್ರೇಷ್ಠರಾದ ಬಸವಣ್ಣನವರು.

ಭಕ್ತಿಯ ತತ್ತ್ವದ ಆಧಾರದ ಮೇಲೆ ಮಾನವ ಸಮಾಜವನ್ನು ನಿರ್ಮಿಸ ಬಯಸಿದ ಬಸವಣ್ಣನವರು ಭಕ್ತಿಯನ್ನು ಸಮಾಜದೊಳಗಿನ ಭ್ರಾತೃತ್ವದ ಸಾಮರಸ್ಯಕ್ಕೆ ಸಕಾರಣವನ್ನಾಗಿಸಿದ್ದು, ಅವರ ಭಕ್ತಿ ತತ್ತ್ವದ ಒಂದು ವಿಶೇಷ. ಭಕ್ತಿಯ ವಿಚ್ಹಾರವನ್ನು ವೈಚಾರಿಕ ಹಿನ್ನೆಲೆಯಲ್ಲಿ ಚಿಂತಿಸಿ ಉಪದೇಶಿಸಿದ ಅವರ ಭಕ್ತಿಯ ತತ್ತ್ವಗಳು ಮಾನವನ ಸಾಮರಸ್ಯದ ಆದರ್ಶ ಬಾಳ್ವೆಯ ಮೂಲಕ ಅಂತರಂಗದೊಳಗಿನ ಪರಮ ಸತ್ಯವನ್ನು ಕಾಣಲು ಭಕ್ತಿಯನ್ನು ಮಾರ್ಗಸೂಚಿಯನ್ನಾಗಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

**ಹರಿವ ನದಿಯ ತೆರನ ಹೋಲಬಲ್ಲಡೆ ಭಕ್ತಿ;**
**ಕೂಡಿ ಸಯದಾನವ ನೀಡಬಲ್ಲಡೆ ಭಕ್ತಿ;**
**ನೀಡಿ ಮಿಕ್ಕುದ ಕಾಯ್ದುಕೊಂಡಿರಬಲ್ಲಡೆ**
**ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ.**

'ಭಕ್ತಿಯನ್ನು ಹರಿವ ನದಿಯ ತೆರನಂತೆ' ಎಂಬ ತಿಳಿಸುವುದರ ಮೂಲಕ ಭಕ್ತಿಯ ವಿಶಾಲತೆಯ ವ್ಯಾಪ್ತಿಯನ್ನು ವಿಶ್ಲೇಷಿಸಿರುವುದನ್ನು ನಾವಿಲ್ಲಿ ಕಾಣಬಹುದು. ಹರಿವ ನದಿಯ ಹಾಗೆ ಭಕ್ತಿ ಎಂಬುವುದು ಸಹ ಸದಾ ಚಲನಶೀಲವಾಗಿರಬೇಕು. ಯಾವ ರೀತಿ ನದಿ ತಾನು ಸಾಗುವ ಹಾದಿಯಲ್ಲಿ ಬಂದ ಅಡ್ಡಿ ಆತಂಕಗಳನ್ನು ದಾಟಿ ಮತ್ತು ಆ ಸಮಯದಲ್ಲಿ ಅದು ಜನೋಪಯೋಗಿರುತ್ತದೆಯೋ ಅದೇ ರೀತಿ ನಮ್ಮ ಭಕ್ತಿಯ ಆಚರಣೆ ಮಾನಸಿಕ ವಿಕಾಸದ ಜೊತೆ ಅದು ಸಮಾಜಮುಖಿಯಾಗಿರಬೇಕು. ಭಕ್ತಿಯ ಮಾರ್ಗ ಸಮಾಜದ ಶ್ರೇಯೋಭಿವೃದ್ಧಿಗೆ ಪೂರಕವಾಗಿರಬೇಕು.

ಭಕ್ತಿಯ ಸಾಧನೆಯ ಹಾದಿಯಲ್ಲಿ ಭಕ್ತನೂ ಸಹ ನೂರಾರು ಕಠಿಣ ತರಹದ ಸತ್ವ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ. ಅವುಗಳನ್ನು ಆತ್ಮವಿಶ್ವಾಸದಿಂದ ಎದುರಿಸಿ ಮುಂದೆ ಸಾಗಬೇಕು. ಹರಿವ ನದಿಯು ತನ್ನ ಪ್ರಯಾಣದ ಹಾದಿ ಎಷ್ಟೇ ವಿಸ್ತಾರವಾಗಿದ್ದರೂ ಸಮುದ್ರದೊಳಗಿನ ಸಮರಸ ಅದರ ಮುಖ್ಯ ಗುರಿಯಾಗಿರುತ್ತದೆ. ಅದರಂತೆ ನಮ್ಮ ಭಕ್ತಿಯ ಆಚರಣೆಯೂ ಪರಮಾತ್ಮನನ್ನು ಕಾಣಲು ಪೂರಕವಾಗಿರಬೇಕು. ಭಕ್ತಿಯ ಆಚರಣೆಯು ವೈಚಾರಿಕ ಪೂರ್ಣವಾಗಿದ್ದುಕೊಂಡು, ಅದು ಭಕ್ತ ಮತ್ತು ಪರಮಾತ್ಮರ ಅನುಸಂಧಾನದ ಪರಿಪೂರ್ಣತೆಯ ದರ್ಶನಕ್ಕೆ ಅವಕಾಶ ನೀಡಿದರೆ; ಅದುವೇ ಅರ್ಥಪೂರ್ಣ ಭಕ್ತಿ ಎನಿಸಿಕೊಳ್ಳುತ್ತದೆ. ಇದು ಬಸವಣ್ಣನವರು ಭಕ್ತಿ ಕುರಿತು ಪ್ರತಿಪಾದಿಸುವ ಚಿಂತನೆಯ ಒಂದು ನೋಟವಾಗಿದೆ.

'ನಮ್ಮ ಅಂತರಂಗದೊಳಗಿನ ಪರಮಾತ್ಮ ತತ್ತ್ವವನ್ನು ಕಾಣುವುದೇ ನಮ್ಮ ಬದುಕಿನ ಮುಖ್ಯ ಧ್ಯೇಯ ಎಂಬುದನ್ನು ನಾವು ಮರೆಯಬಾರದು' ಎನ್ನುವ ಬಸವಣ್ಣನವರು ಮನಸ್ಸು ಮತ್ತು ಬುದ್ಧಿಯನ್ನು ಶುದ್ಧವಾಗಿಟ್ಟುಕೊಳ್ಳುವುದೇ ಭಕ್ತಿಯ ನಿಜವಾದ ಉದ್ದೇಶ ಎಂದು ಅರ್ಥೈಸುತ್ತಾರೆ. ಭಕ್ತಿಯ ಸಾಧನೆಯ ಹಾದಿಯಲ್ಲಿ ಭಕ್ತನು ಸತ್ಯವಂತನಾಗಿರಬೇಕು ಎಂಬ ಕಿವಿಮಾತು ಸಹ ಅವರದೇ.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-577 202







ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯಾ ಎರಡಾಳಿನ ಭಾಷೆಯ
ಕೊಲುವೆನೆಂಬ ಭಾಷೆ ದೇವನದು;
ಗೆಲುವೆನೆಂಬ ಭಾಷೆ ಭಕ್ತನದು;
ಸತ್ಯವೆಂಬ ಕೂರಲಗನೆ ತಳೆದುಕೊಂಡು
ಸದ್ಭಕ್ತರು ಗೆದ್ದರು ಕಾಣಾ.

ನಮ್ಮ ದೇಶವನ್ನು ಬಹು ಹಿಂದಿನಿಂದಲೂ ಜಂಬೂದ್ವೀಪ ಎಂದು ಕರೆಯಲಾಗಿದೆ. ಭೂಮಂಡಲದ ಮೇಲೆ ಒಂಭತ್ತು ಖಂಡಗಳಿವೆ ಎಂದು ಸಹ ನಂಬಲಾಗಿತ್ತು. ಭಗವಂತ ಈ ಜಗತ್ತಿನಲ್ಲಿ ನಡೆಸುತ್ತಿರುವ ಒಂದು ವಿದ್ಯಮಾನವನ್ನು ಬಸವಣ್ಣನವರು ಇಲ್ಲಿ ವಿವರಿಸಲು ಹೊರಟಿದ್ದಾರೆ. ಜಗತ್ತನ್ನು ಸೃಜಸಿದ ಪರಮಾತ್ಮನು ಸತ್ಯ ತತ್ತ್ವವನ್ನು ಯಾರಿಗೂ ಕಾಣದಂತೆ ಇರಿಸಿದ್ದಾನೆ. ಯಾರು ಅಸತ್ಯದ ಮಾಯಾ ಪ್ರಪಂಚದೊಳಗೆ ಬೀಳದೆ, ಸತ್ಯದ ಅರಿವನ್ನು ಪಡೆಯುತ್ತಾರೆಯೋ ಅವರು ಈ ಜಗತ್ತಿನ ಭಕ್ತಿಯ ಹೋರಾಟದಲ್ಲಿ ಗೆದ್ದಂತೆ ಎಂಬುದು ಪರಮಾತ್ಮನು ಮಾನವ ಜಗತ್ತಿಗೆ ನೀಡಿದ ಒಂದು ಹೋರಾಟ ಎಂದು ಬಸವಣ್ಣನವರು ಬಣ್ಣಿಸಿದ್ದಾರೆ.

ಅಸತ್ಯದ ಮಾಯಾ ಪ್ರಪಂಚದೊಳಗೆ ಯಾರು ಹೋರಾಡಿ ಭಗವಂತನ ಪರಮ ಸತ್ಯವನ್ನು ತಿಳಿಯಲು ಹೊರಡುತ್ತಾನೆಯೋ ಅವನೇ ನಿಜಭಕ್ತ ಎನಿಸಿಕೊಳ್ಳುತ್ತಾನೆ. ಅಂತರಂಗದೊಳಗಿನ ಪರಮ ಸತ್ಯವನ್ನು ಕಾಣುವುದು ಅಷ್ಟು ಸುಲಭದ ಕಾರ್ಯವಲ್ಲದಿದ್ದರೂ; ಸದ್ಭಕ್ತರು ಸತ್ಯವೆಂಬ ಆಯುಧವನ್ನು ಸದಾ ಆಶ್ರಯಿಸಿಕೊಂಡಿದ್ದಾರೆ, ಸತ್ಯ ಮತ್ತು ಅಸತ್ಯದೊಳಗಿನ ಭಕ್ತಿಯ ಹೋರಾಟದಲ್ಲಿ ಜಯಿಸಲು ಸಾಧ್ಯ ಎಂಬ ಅಭಿಮತ ಬಸವಣ್ಣನವರು.

ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಗಿತ್ತು
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತಾನು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

ಪಂಚಭೂತ ತತ್ತ್ವಗಳಿಂದ ನಿರ್ಮಾಣಗೊಂಡಿರುವ ಭೌತಿಕ ಜಗತ್ತು ಬೇರೆ ಅಲ್ಲ ! ಹಾಗೇ ಅದೇ ಪಂಚಭೂತ ತತ್ತ್ವಗಳಿಂದ ನಿರ್ಮಾಣಗೊಂಡಿರುವ ಈ ಶರೀರ ಬೇರೆ ಅಲ್ಲ ! ಪಂಚಭೂತ ತತ್ತ್ವಗಳನ್ನು ಒಂದು ಸೂತ್ರಬದ್ಧ ರೂಪದಲ್ಲಿ ಬಂಧಿಸಲ್ಪಟ್ಟಿರುವಂತೆ ಈ ಶರೀರದೊಳಗೂ ಜೀವಾತ್ಮನು ಬಂಧಿಸಲ್ಪಟ್ಟಿದ್ದಾನೆ. ಅದರೊಳಗಿಂತ ಜೀವಾತ್ಮನು ಮುಕ್ತವಾಗುವ ಪರಿಯನ್ನು ಗುರು ಬಸವಣ್ಣನವರು ಭಕ್ತಿಯ ತತ್ತ್ವ ಸೂತ್ರದ ವಚನಗಳಲ್ಲಿ ವ್ಯಾಖ್ಯಾನಿಸಿರುವುದನ್ನು ಕಾಣಬಹುದು.

ನಮ್ಮ ಈ ಶರೀರವನ್ನು ಕ್ಷೇತ್ರ ಎಂದು; ಈ ಜಡ ಶರೀರದಲ್ಲಿದ್ದುಕೊಂಡು ಜಗತ್ತನ್ನು ಅರಿಯುವ ಪರಬ್ರಹ್ಮ ಶಕ್ತಿಗೆ ಕ್ಷೇತ್ರಜ್ಞ ಎಂದು ಕರೆಯಲಾಗಿದೆ. ಕ್ಷೇತ್ರ ಮತ್ತು ಕ್ಷೇತ್ರಜ್ಞ ತತ್ತ್ವಗಳಿಗೆ ಅಧಿಷ್ಠಾನವಾಗಿರುವ ತತ್ತ್ವವನ್ನು ಪರಬ್ರಹ್ಮ ಎಂದು ಸೂಚಿಸಿರುವುದನ್ನು ಆಧ್ಯಾತ್ಮ ತತ್ತ್ವ ಸಾರದಲ್ಲಿ ಕಾಣಬಹುದು. ಜೀವಾತ್ಮನಿಗೆ ಆವರಿಸಲ್ಪಟ್ಟಿರುವ ಕರ್ಮತ್ರಯಗಳೆಂಬ ಅಜ್ಞಾನದ ಮುಸುಕನ್ನು ತೆಗೆದಾಗ ಅಂತರಂಗದೊಳಗಿನ ಪರಮ ಸತ್ಯವಾದ ಪರಬ್ರಹ್ಮ ತತ್ತ್ವ ಕಾಣಲು ಸಾಧ್ಯ.

ಭಕ್ತಿ ಸಾಧನೆಯ ವಿಕಾಸದ ಮೂಲಕ ಅಜ್ಞಾನದ ತೆರೆಯನ್ನು ಕಳೆದುಕೊಂಡಾಗ ಅಂತರಂಗದೊಳಗಿನ ಪರಮಜ್ಞಾನ ತತ್ತ್ವವನ್ನು ಕಾಣಲು ಸಾಧ್ಯ ಎನ್ನುವ ಬಸವಣ್ಣನವರು ಭಕ್ತಿಯ ಜಾಗೃತಿಗೆ ಸಕಾರಣವಾಗಿರುವ ಭಕ್ತಿಯ ಈ ಶರೀರದೊಳಗೆ ಜ್ಞಾನದ (ಗುರು) ಬೀಜವನ್ನು ಬಿತ್ತಿಗೊಳ್ಳಬೇಕು. ಆಧ್ಯಾತ್ಮ ಕೃಷಿಯಲ್ಲಿ ಸಾಗುವ ಭಕ್ತ, ಅಂತರಂಗದೊಳಗೆ ಜ್ಞಾನದ ಬೀಜವನ್ನು ಜಾಗೃತಿಗೊಳಿಸಿ ಕೊಂಡು ಸಾಗಿದಾಗ ಲಿಂಗತತ್ತ್ವ ಎಲೆ, ಹೂವು ಮತ್ತು ಕಾಯಿಗಳನ್ನು ಕಾಣಲು ಸಾಧ್ಯ ಎನ್ನುತ್ತಾರೆ.

ಭಕ್ತಿಯ ಅಂತರಂಗದೊಳಗೆ ಗುರುವಿನ ಕಾರುಣ್ಯದ ಉಪದೇಶ ಪಡೆದು ಭಕ್ತ ಕ್ರಿಯಾಶೀಲನಾದಾಗ ಜ್ಞಾನದ ಅರಿವು ಕಾಣಲು ಸಾಧ್ಯ. ಅರಿವು ಜಾಗೃತಿಸಿಕೊಡು ಅದು ಪೂರ್ಣತೆಗೊಳ್ಳಲು ಆರಂಭಿಸಿದಾಗ ಅಂತರಂಗದೊಳಗಿನ ಪರಮಸತ್ಯದ ಪರಮಾತ್ಮನ ಇರುವಿಕೆಯ ಜ್ಞಾನದ ಬೆಳಕು ಕಾಣಲು ಸಾಧ್ಯವಾಗುತ್ತದೆ. ಯೋಗಸೂತ್ರದ ಅನ್ವಯ ನಿರ್ಮಲ ಭಕ್ತಿಯ ಆಚರಣೆಯ ಮೂಲಕ ನಮ್ಮ ಅಂತರಂಗದೊಳಗಿನ ಷಟ್‌ಚಕ್ರಗಳು ಜಾಗೃತಗೊಂಡಾಗ







ಅವು ಊರ್ಧ್ವಮುಖವಾಗಿ ಸಂಚರಿಸಲು ಪ್ರಾರಂಭಿಸುತ್ತದೆ. ಆ ಸಮಯದಲ್ಲಿ ಅಂತರಂಗದೊಳಗೆ ಮುಸುಕಿರುವ ತಾಮಸ ವೃತ್ತಿಗಳು ಕಳೆದು ಜ್ಞಾನದ ಅರಿವು ಒಡಮೂಡಲು ಕಾರಣವಾಗುತ್ತದೆ.

ಪೂರ್ಣತೆಯ ಜ್ಞಾನದ ಅರಿವು ಪಡೆದ ಭಕ್ತನಿಗೆ ಕ್ಷೇತ್ರ ಮತ್ತು ಕ್ಷೇತ್ರಜ್ಞಗಳಿಗೆ ನಾನು ಹೇಗೆ ಬೇರೆ ಎಂಬ ಅನುಭಾವ ಸ್ಫುರಣೆಗೊಳ್ಳಲು ಕಾರಣವಾಗುತ್ತದೆ. ಸಾಕ್ಷಿ ಪ್ರಜ್ಞೆಯಿಂದ ಸಾಕ್ಷಿಭೂತಿಯಾಗಿದ್ದುಕೊಂಡು, ಎಲ್ಲದರಲ್ಲಿಯೂ ಇದ್ದು ಇಲ್ಲದ ಹಾಗೆ ಇರುವಂತಹ ನಿರ್ಲಿಪ್ತತೆಯ ನಿರ್ಭಾವ ಸ್ಥಿತಿಯ ಯೋಗದ ಆನಂದದಲ್ಲಿ ವಿವಹರಿಸಲು ಸಾಧ್ಯವಾಗುತ್ತದೆ.

ಯಾವ ರೀತಿ ಹಂತ ಹಂತವಾಗಿ ಭೂಮಿಯೊಳಗಿನ ಬೀಜವು ಮೊಳಕೆಯೊಡೆದು ಸಸಿಯಾಗಿ, ಸಸಿ ಗಿಡವಾಗಿ, ಹೂವು, ಕಾಯಿ, ಹಣ್ಣು ಆಗಿ ರೂಪಾಂತರಗೊಂಡು ಹಣ್ಣು ನಿಷ್ಪತ್ತಿಗೊಂಡು ತಾನಾಗಿಯೇ ಮರದಿಂದ ಬೇರ್ಪಡುವಂತೆ; ಹಾಗೇ ಇಷ್ಟಲಿಂಗ ಯೋಗದ ಅನುಷ್ಠಾನದ ಮೂಲಕ ಮನದೊಳಗಿನ ಅಜ್ಞಾನವನ್ನು ಹಂತ ಹಂತವಾಗಿ ಕಳೆದುಕೊಳ್ಳಬೇಕು. ಅಂತರ್ ಪ್ರಜ್ಞೆಯಾಗಿರುವ ಪರಮಾತ್ಮ ತತ್ತ್ವವೇ ನಾನೆಂಬ ಭಾವದ ನಿಜ ಅರಿವು ಉಂಟಾದಾಗ ದೇಹದಿಂದ ಬಂಧಿಸಲ್ಪಟ್ಟಿರುವ ಎಲ್ಲಾ ಬಂಧನಗಳಿಂದ ಹೊರಬರಲು ಸಾಧ್ಯ ಎಂಬ ಸಂದೇಶವನ್ನು ಇಷ್ಟಲಿಂಗ ಯೋಗ ಸೂತ್ರದ ಮೂಲಕ ಅತ್ಯಂತ ಮಾರ್ಮಿಕವಾಗಿ ಬಸವಣ್ಣನವರು ವಿಶ್ಲೇಷಿಸಿರುವುದನ್ನು ನಾವು ಕಾಣಬಹುದು.

ಶ್ರಾವಣ ಶುದ್ಧ ಪಂಚಮಿಯ ದಿನದಂದು ಬಸವಣ್ಣನವರು ಇಷ್ಟಲಿಂಗ ಯೋಗ ಸೂತ್ರದ ಮೂಲಕ ಕಾಯ ಜೀವದ ಬಂಧನಗಳಿಂದ ಮುಕ್ತಗೊಂಡು, ಇಚ್ಛಾಮರಣಿಯಾಗಿ ಪರಬ್ರಹ್ಮ ತತ್ತ್ವದಲ್ಲಿ ಸಮರಸಗೊಂಡ ದಿನವನ್ನು ಬಹು ಹಿಂದಿನಿಂದಲೂ ಬಸವ ಪಂಚಮಿ ಎಂದು ಆಚರಿಸಿಕೊಂಡು ಬರಲಾಗುತ್ತಿದೆ. ಇಷ್ಟಲಿಂಗ ಯೋಗ ಸೂತ್ರದ ಮೂಲಕ ಬದುಕಿನ ಪರಮ ಸತ್ಯವನ್ನು ಕಾಣಲು ತಿಳಿಸಿದ ಅವರ ಯೋಗ ಸೂತ್ರವನ್ನು ನಾವಿಂದು ಅರಿತು, ಅದರಂತೆ ಕ್ರಿಯಾಶೀಲರಾಗುವುದು ಬದುಕಿನ ಸಾರ್ಥಕತೆಯಾಗಿದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨

ಲೇಖನ

# ಸೌಜನ್ಯತೆ ಅರಿವಿನ ಸಮಾನನೀತಿ

- ದೊಡ್ಡಬಾಣಗೆರೆ ಪ್ರಕಾಶಮೂರ್ತಿ *

ಅದೆಷ್ಟೇ ಶ್ರೀಮಂತಿಕೆಯಿದ್ದರೂ ನಿತ್ಯ ಜೀವನದಲ್ಲಿ ಮಾನವ ಅನ್ಯರ ಸಲಹೆ, ಸಹಾಯ ಸಹಕಾರಗಳಿಗೆ ಪಾತ್ರನೇ ಹೌದು. ಹೀಗಿರುವಾಗ ಎಲ್ಲರಿಗೂ ಹಿತಕರನಾಗಿ ಬದುಕುವ ಹಂಬಲ ಸದಾ ಅಗತ್ಯವೆನಿಸುತ್ತದೆ. ಈ ಅಗತ್ಯತೆ ಕುರಿತಂತೆ ಮಾನವನು ಸೌಜನ್ಯದಿಂದ ನಡೆದುಕೊಳ್ಳುವ ಬಗ್ಗೆ ಬಸವಣ್ಣನವರು ತಮ್ಮ ವಚನಸುಧೆಯಲ್ಲಿ ಅತೀವ ತತ್ತ್ವಸಾರವನ್ನು ಬೆಳಕಾಗಿಸಿದ್ದಾರೆ. ಸಜ್ಜನಿಕೆಯನ್ನು ಸ್ವಾಗತಿಸಿ ಸೌಜನ್ಯಪರ ಸಮಾಜದ ಹಿತಚಿಂತನೆ ಬಯಸಿ ಸರ್ವರ ಏಳಿಗೆಗೆ ಸಾರ್ಥಕ ಬದುಕಿನತ್ತ ಎಲ್ಲರೂ ಸಾಗಬೇಕೆಂಬುದೇ ಅವರ ಜಾಗೃತಿಕ ಕರೆ. ವಿಶಾಲತೆಗೆ ದನಿಗೊಟ್ಟು ವಿಚಾರಪರ ನೀತಿಪಥದಲ್ಲಿ ನಡೆದು ಸಮಾಜ ಸೌಖ್ಯ ಕಾಣುವ ಹೆಗ್ಗುರಿ ಅಣ್ಣನವರದಾಗಿತ್ತು. ಈ ಸಲುವಾದ ಅವರ ಸಮಾಜ ಸುಧಾರಣಾ ಕಾರ್ಯ ಬಹುಮುಖವಾದುದು.

ಬಂಧುಗಳೊಡನೆ, ಮಿತ್ರರೊಡನೆ ಅಥವಾ ಯಾವುದೇ ಪರಿಚಿತರೊಡನೆ ತನ್ನ ಬಾಂಧವ್ಯತೆಯನ್ನು ಮಾನವ ನಿರಂತರ ಬೆಳೆಸಿಕೊಂಡೇ ಹೋಗಬೇಕು. "ಇರುವಂತಹುದನ್ನು ಮೊಟಕುಗೊಳಿಸಿಕೊಂಡರೆ ಅದು ಮೊಟಕಾಗಿ ಅಲ್ಲಿಗೇ ನಿಂತು ಹೋಗುತ್ತದೆ. ಇವೆಲ್ಲವೂ ನಾವು ಬೆಳೆಸಿಕೊಂಡಂತೆ ಮಾತ್ರ ಹಿಗ್ಗುತ್ತವೆ. ಸತತ ಇವುಗಳು ಹಿಗ್ಗಿದಾಗ ಮಾತ್ರ ನಮ್ಮ ಬಾಳ್ವೆ, ಬದುಕು, ಆರೋಗ್ಯ, ಯಶಸ್ಸುಗಳು ಕೂಡ ಹಿಗ್ಗಿ ನಮಗೆ ಖುಷಿ ಕೊಡುತ್ತವೆ. ಸಂತೋಷ ನಮ್ಮದಾದಾಗ ನೆಮ್ಮದಿಯೂ ಹಾಸುಹೊಕ್ಕಾಗಿ ಕೂಡಿರುತ್ತದೆ" ಎಂಬ ಸಮಾಜದ ಹಿತ ಬಯಸುವ ಸದಭಿಪ್ರಾಯ ಬಸವಣ್ಣನವರದು. ನಿಲುವಾದ ಜಾಗೃತಿ ಮೂಡಿಸಲು ಇವರ ಬಹುತೇಕ ವಚನಗಳು ಎಲ್ಲರನ್ನೂ ಆದರ್ಶದ ಹಾದಿಯತ್ತ ಕರೆದೊಯ್ಯುತ್ತವೆ.

**ಏನು ಬಂದಿರಿ ಹದುಳವಿದ್ದಿರಾ ಎಂದರೆ**
**ನಿಮ್ಮಯ ಮೈಸಿರಿ ಹಾರಿ ಹೋಹುದೇ ?**
**ಕುಳ್ಳಿರಿ ಎಂದರೆ ನೆಲ ಕುಳಿ ಪೋಪುದೆ ?**
**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ,**
**ಕೆಡಹಿ ಮೂಗನು ಕೊಯ್ಯನೇ? ಕೂಡಲಸಂಗಮದೇವ.**

ಅಕ್ಕರೆವೆತ್ತು ಅಭಿಮಾನ ಸುರಿದ ಒಂದು ಆದರ್ಶ ನುಡಿ. ಸಜ್ಜನತೆಯ ಸೌಂದರ್ಯತೆಯ ಚಿತ್ರವನ್ನು ಸೆರೆ ಹಿಡಿದು ಎದುರಿಡುವುದೇ ಮಾತು. ಎದುರಾದವರ ಹಿತ ಕೋರಿ ನಗೆವೆತ್ತು ನುಡಿವ ಒಂದು ಸರಳ ನುಡಿಯ ಸೌಜನ್ಯಪರ ಬಾಂಧವ್ಯತೆಯನ್ನು ಈ ಮಾತು ಚಿತ್ರಿಸುತ್ತದೆ. ಎದುರಾಗಿ ಬಂದ ಬಂಧು ಅಥವಾ ಮಿತ್ರರನ್ನು "ಶರಣು" ಯಾವಾಗ ಬಂದಿರಿ, ಬನ್ನಿ ಒಳಬನ್ನಿ. ಎಲ್ಲರೂ ಆರೋಗ್ಯವೇ" ಎಂದು ಬಾಯ್ತುಂಬ ಮಾತನಾಡಿ ಅವರನ್ನು ವಿಚಾರಿಸಿದರೆ "ನಿಮ್ಮ ಮೈಸಿರಿ ಹಾರಿ ಹೋಗುವುದೇ?" ಎಂದು ಪ್ರಶ್ನಿಸುತ್ತಾರೆ. "ಕುಳಿತುಕೊಳ್ಳಿ ಎಂದರೆ ನಿಮ್ಮ ಮನೆಯ ನೆಲ ಗುಂಡಿ ಬೀಳುವುದೇ" – ಎಂಥಾ ಎಚ್ಚರದ ತಿಳಿವಿನ ಮಾತು ಬಂದಂಥ ಅತಿಥಿಗಳಿಗೆ; ನಿಮ್ಮ ಬಂಧುಗಳಿಗೆ ನೀವೇನೂ ಕೊಡುವುದು ಬೇಡ. ಅವರ ಆತ್ಮೀಯರಾಗಿ ಒಡನುಡಿದಂಥಹ ಒಂದು ಗುಣವಿಲ್ಲದಿದ್ದರೆ ಕೂಡಲಸಂಗಮದೇವನು ಕೆಡವಿ ನಿಮ್ಮ ಮೂಗನು ಕೊಯ್ಯು ನಿಮ್ಮನ್ನು ಸಹಜವಾಗಿ ಮೂಕನಾಗಿಸದಿರುವನೇ?" ಎಂದು ನಮ್ಮಲ್ಲಿನ ಸ್ವಾರ್ಥಗುಣದ ಕೆಟ್ಟ ಸ್ವಭಾವವನ್ನು ಎತ್ತಿ ಹಿಡಿಯುತ್ತಾರೆ. ಸಮಾಜದ ನಡೆಯ ನಿಜ ಚಿತ್ರಣಗಳನ್ನು ಎದುರಿಡುತ್ತಾರೆ. ತಿದ್ದಿಕೊಂಡು ನಡೆದು ಸಮಾಜಪ್ರಿಯ ನಡವಳಿಕೆಗಳನ್ನು ಮನಗೊಡಲು ಹುರಿದುಂಬಿಸಿ ಬದುಕಿನ ಚೊಕ್ಕಟತೆಗೆ ಕರೆ ಕೊಡುತ್ತಾರೆ.

ಎಲ್ಲಾ ಮಾನವರಲ್ಲೂ ಸೌಜನ್ಯತೆಯ ಅರಿವು ಜಾಗರೂಕವಾಗಿರಬೇಕು. ಎಲ್ಲರೂ ನಮ್ಮವರೇ ಎಂಬ ಆದರ್ಶ, ಎಲ್ಲ ಮನಗಳಲ್ಲೂ ಮನೆ ಮಾಡಬೇಕು. ಭಿನ್ನಭಾವಗಳನ್ನು ತುಳಿದು ಹಾಕಿ 'ನಾವುಗಳೆಲ್ಲಾ ಒಂದೇ' ಎಂಬ ಸಜ್ಜನ ಪರಂಪರೆಯ ನೀತಿ ಕೌಶಲ್ಯತೆ ಹೃದಯಾತ್ಮಕವಾಗಿ ವಿಶ್ವಾಸ ಪೂರ್ವಕವಾಗಿ ನೆಲೆ ಹಾಸಬೇಕು. ಮಾತು, ಕೃತಿಗಳಲ್ಲೂ ನಮ್ಮ ಸೌಜನ್ಯ ಪರಂಪರೆಯ ನಡವಳಿಕೆಗಳು ಮನೆ ಮಾತಾಗಬೇಕು. ಸಮತಾಭಾವದ ಉಸಿರು ಎಲ್ಲಾ ಹೃದಯಗಳ ನಾಡಿ

೪, "ಗೀತಾನಿಲಯ", ಜನೇ ಕ್ರಾಸ್, ರಾಜೇಂದ್ರನಗರ, ಚಿತ್ರದುರ್ಗ-೫೭೭೫೦೧



ಮಿಡಿತವಾಗಬೇಕು. ನಿತ್ಯ ಕರ್ಮದ ವಿವಿಧ ದಿನಚರಿಗಳಲ್ಲೂ ವಿಶಾಲತೆ ಹರಿದು ಭಾವೈಕ್ಯತೆಯ ಸೊಬಗು ತುಂಬಬೇಕು. ಅದಾಗ ಬಸವಣ್ಣನವರ ಧ್ಯೇಯೋದ್ದೇಶ ಕಂಡಂತಾಗುತ್ತದೆ.

ಭಿನ್ನಭಾವದ ಹೆಜ್ಜೆ ಮರೆತು ಸೌಜನ್ಯತೆಯ ಹಾದಿಯತ್ತ ನಡೆವುದು ಅಣ್ಣನವರ ಏಕಮಾತ್ರ ಗುರಿಯಾಗಿತ್ತು. "ಹಿರಿಯ-ಕಿರಿಯ, ಅಜಾತಿ-ಈಜಾತಿ" ಎಂಬುದರ ಗೋಜಿನಿಂದ ದೂರವಾಗಿದ್ದರು. ಯಾರೇ ಆಗಿರಲಿ ಭಕ್ತಿ ಪ್ರಿಯನಾಗಿ ಕಾಯಕ ಜೀವಿಯಾಗಿ ಜ್ಞಾನಶೀಲನೆನಿಸಿದ್ದರೆ ಸಾಕು. ಅಂತಹವರೆಲ್ಲರಿಗೂ ಅವರ ಬಳಗದಲ್ಲಿ ಅವಕಾಶ ದೊರೆಯುತ್ತಿತ್ತು. ಮಾನ್ಯತೆಯೂ ಮೀಸಲಾಗಿರುತ್ತಿತ್ತು. ಭಾವುಕತೆ; ಮೈವೆತ್ತ ಭಕ್ತಿಯಿದ್ದರೆ ಎಲ್ಲಾ ಶರಣರನ್ನೂ ಅವರು ಆದರಿಸುತ್ತಿದ್ದರು. ಶರಣರೊಡನೆ ಬೆರೆತು ನಡೆದು ಶರಣರಿಗಾಗಿ ಶ್ರಮಿಸುತ್ತಿದ್ದರು. ಈ ಹಾದಿಯಲ್ಲಿ 'ಕೂಡಲ ಸಂಗಮದೇವಾ' ಅಂಕಿತದಲ್ಲಿ ಬಸವಣ್ಣನವರು ನಮಗೆ ರಚಿಸಿಕೊಟ್ಟು ಹೋಗಿರುವ ವಚನರಾಶಿ ಅಪಾರವಾದುದು. ಜಗತ್ತಿಗೆ ಮಾನ್ಯವಾಗಿರುವಂತಹುದು. ಪ್ರತಿ ವಚನದಲ್ಲೂ ನೀತಿವೆತ್ತ; ಅರ್ಥಪೂರ್ಣ ಸತ್ವಭರಿತ ಸರಳ ಸಾಹಿತ್ಯ, ಎಲ್ಲರಿಗೂ ಹಿತಕರವೆನಿಸುವ ಜಾಗರೂಕ ತಿಳಿವು ಹೊತ್ತ ಈ ವಚನಗಳು ಎಲ್ಲರನ್ನೂ ರಂಜಿಸುತ್ತವೆ. ಎಲ್ಲರಿಗೂ ಅಗತ್ಯವೆನಿಸುತ್ತವೆ.

"ನಮ್ಮಿಂದ ಅನ್ಯರಿಗಾಗುವ ಸಹಾಯವನ್ನು ದೊರಕಿಸಿ ಅನ್ಯರಿಂದ ನಮಗಾಗಬೇಕಾದ ನೆರವುಗಳನ್ನು ಪರಸ್ಪರ ಪಡೆಯುವುದು ಎಲ್ಲರ ಕುಶಲತೆಗೂ ಶ್ರೇಯಸ್ಕರ, ನಿಶ್ಶಕ್ತರ ಬದುಕುಗಳಿಗೆ ಶಕ್ತರೂ ಕೂಡ ಸಹಕರಿಸುವುದು ಉಭಯರಿಗೂ ಒಳ್ಳೆಯದೇ" ಎಂಬ ತಾತ್ವಿಕ ನೀತಿಗೆ ಅಣ್ಣನವರ ಪೂರ್ಣಬೆಂಬಲ ದೊರಕುತ್ತಿತ್ತು. "ನಾವು-ನೀವು, ಇರುವವರು-ಇಲ್ಲದವರು" ಎಂಬ ಭಿನ್ನತೆಯ ನೀತಿಗೆ ಬಸವಣ್ಣನವರು ಎಂದೂ ದೂರವಾದವರೇ. ಸಮಾನ ನೀತಿಯ ಸೌಹಾರ್ದ ಹಂಬಲಗಳಿಗೆ ಬೆನ್ನು ತಟ್ಟುತ್ತಿದ್ದರು. ವಿಶಾಲ ಮನೋಭಾವಕ್ಕೆ ಸದಾ ಹತ್ತಿರವಿದ್ದ ವಿಚಾರಶೀಲ ವ್ಯಕ್ತಿತ್ವ ಸಮಾಜದ ಜನಾದರಣೆಗೆ ಪಾತ್ರರಾದವರು. ಸರ್ವರಲ್ಲೂ ಆದರ್ಶತೆಯ ನಂಟನ್ನು ಬೆಳೆಸಿ ಎಲ್ಲರ ಪ್ರೀತಿ, ವಿಶ್ವಾಸಕ್ಕೆ ಬದ್ಧರಾದವರು.

"ಮನವಿಲ್ಲದೆ ಪೂಜೆ ಸೇವೆ ಕೆಲಸಗಳಲ್ಲಿ ತೊಡಗಿ, ನಿಜವಿಲ್ಲದೆ ನೀಡುವ ಮಾಡುವ ಕಾರ್ಯಗಳಲ್ಲಿ ತೊಡಗಿ ಯಶಕಂಡು ದೈವನಿಗೆ ಪ್ರಿಯವಾಗಲು ಹೇಗೆ ಸಾಧ್ಯ? ಮಾಡುವಂಥ ಅಥವಾ ನೀಡುವಂಥ ಚಟುವಟಿಕೆಗಳಲ್ಲಿ ಸಹಜವಾದ ಭಕ್ತಿ, ಶ್ರದ್ಧೆ, ವಿಶ್ವಾಸಗಳಿರದೆ ದೈವನು ಒಪ್ಪಿ ಭಕ್ತರಿಗೆ ಹೇಗೆ ತಾನೆ ಒಲಿದು ಕೂಡಿಕೊಂಡಾನು?" ಎಂಬ ತಾತ್ವಿಕ ಅಭಿಪ್ರಾಯದ ಸಹಜ ಸಂಗತಿಯನ್ನು ತಮ್ಮ ವಚನದಲ್ಲಿ ಬಸವಣ್ಣನವರು ಅಭಿವ್ಯಕ್ತಿಗೊಳಿಸಿದ್ದಾರೆ.

**"ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ**
**ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ**
**ಮಾಡುವ ನೀಡುವ ನಿಜಗುಣವುಳ್ಳೊಡೆ**
**ಕೂಡಿಕೊಂಬನೆ ನಮ್ಮ ಕೂಡಲಸಂಗಮದೇವ."**

ಎಂದು ಮನಸ್ಸು, ಭಕ್ತಿ, ಕರ್ಮಪಥಗಳ ಸತ್ಯ ಸಂಗತಿಯ ಸಹಜಾಭಿಪ್ರಾಯವನ್ನು ಈ ವಚನದಲ್ಲಿ ತಿಳಿಸುತ್ತಾರೆ. ಸತ್ಯಾಂಶಗಳಿಂದ ದೂರವಾಗಿ ಕೂಡಲಸಂಗಮ ದೇವನ (ದೈವ) ಕೃಪಾಶೀರ್ವಾದಕ್ಕೆ ಪಾತ್ರರಾಗಲು ಯಾರಿಂದ ತಾನೇ ಸಾಧ್ಯವಾದೀತು? ಪರಿಶುದ್ಧವಾದ ನಿರ್ಮಲ ಮನಸ್ಸಿನಿಂದ ಆರಾಧಿಸುವವರಿಗೆ ದೈವನೊಲ್ಮೆಯ ಕೃಪೆ, ಆಶೀರ್ವಾದ, ಹಾರೈಕೆಗಳ ಸಹಕಾರ ದೊರೆತೀತು.

"ಆಸೆ ಆಕಾಂಕ್ಷೆಗಳ ಒತ್ತಾಸೆಯಿಂದ ಭಕ್ತಿಪೂರ್ವಕ ಶ್ರದ್ಧೆ ವಿಶ್ವಾಸಗಳಿಂದ ಸತ್ಯ ಮನಸ್ಸಿನ ಸಹಜ ಭಾವದ ತದೇಕ ಚಿತ್ತದಲ್ಲಿ ದೈವನಲ್ಲಿ ದೃಢಮನಸ್ಕರಾಗಿ ಮೊರೆಯಿಟ್ಟಾಗ ಮಾತ್ರ ತನ್ನ ಭಕ್ತರಿಗೆ ಅಗತ್ಯ ನೆರವು ದೈವನಿಂದಲೂ ದೊರೆಯುತ್ತದೆಂಬ" ದೃಢ ವಿಶ್ವಾಸವನ್ನು ಈ ವಚನ ತಿಳಿಸುತ್ತದೆ. ಭಕ್ತಿ-ಭಾವದ ಶ್ರದ್ಧಾ ವಿಶ್ವಾಸ ನೀತಿ ಇಲ್ಲಿ ಪ್ರಮುಖವಾದುದು. ಇಂತಹ ಗಾಢ ಪ್ರಮುಖತೆಗೆ ಭಕ್ತನು ಅದ್ವಿತೆ ನೀಡಿ ಮನೆ-ಮನ-ಕೃತಿಗಳನ್ನು ಮೀಸಲಿಟ್ಟಾಗ ದೈವಕೃಪೆಯೂ ಮೀಸಲಾದುದಾಗಿರುತ್ತದೆ.

ಬದುಕಿನ ಪ್ರತಿ ಹಂತದ ವಿವಿಧ ಹೆಜ್ಜೆಗಳಲ್ಲೂ ಸೌಜನ್ಯತೆಯ ಪರಂಪರೆಯನ್ನು ಅಣ್ಣನವರು ತೋರಿಸುತ್ತಾರೆ. "ಬಡವ-ಬಲ್ಲಿದ ಯಾರೇ ಇದ್ದರೂ ಆತನ ನಡವಳಿಕೆಗಳಲ್ಲಿನ ಸಜ್ಜನಿಕೆ ಆತನನ್ನು ಕಾಪಾಡುತ್ತದೆ" ಎಂಬ ಅವರ ಅಭಿಪ್ರಾಯ ಕೂಡ ಎಲ್ಲರ ಬದುಕಿನ ಚಿತ್ರಕ್ಕೂ ಕನ್ನಡಿ ಹಿಡಿಯುತ್ತದೆ. ಸೃಜನಶೀಲ ಸೌಜ್ಯನೇತರ ಸಜ್ಜನಿಕೆ ಮಾನವನ ನಡೆಗೆ ಒಂದು ಪ್ರಮಾಣಪತ್ರದಂತೆ. ಮಾನವ ತನ್ನ ಎಲ್ಲಾ ಚಟುವಟಿಕೆಗಳಿಂದ ಪಾರಾಗಿ ಹೊರಬರಲು ಸಜ್ಜನಿಕೆ ಜಾಗೃತಿಕ ಚುಚ್ಚುಮದ್ದಿನಂತೆ ತನ್ನಲ್ಲಿರುವ ವಿಶೇಷ ಬಗೆಯ ಅಪಾರ ನೀತಿ ಶಕ್ತಿಯನ್ನು ಬಳಸಿಕೊಂಡು ಬಾಳ್ವೆಯ ಆಗು-ಹೋಗುಗಳನ್ನು ಪ್ರಾಯೋಗಿಕವಾಗಿ ಕಂಡುಕೊಳ್ಳುವುದು ಕೂಡ ಒಂದು ಅನುಭವ ಸಿದ್ಧಾಂತದಂತೆ. ಈ ಸಿದ್ಧಾಂತವನ್ನು ಬಸವಣ್ಣನವರು ತಾತ್ವಿಕವಾಗಿ ಮನಗಂಡಿದ್ದರು.







ವಿವಿಧ ವಿಚಾರದ ಧೀಮಂತ ಶ್ರೀಮಂತಿಕೆಯನ್ನು ಆಚರಣೆಯ ಮೂಲಕ ಅಣ್ಣನವರು ಸಮಾಜದ ಎದುರಿಟ್ಟು ಹೋಗಿದ್ದಾರೆ. ವಿಫುಲವಾದ, ಗಾಢವಾದ ನೀತಿ ತತ್ತ್ವಗಳನ್ನು ಮಾನವೀಯತೆಯನ್ನು ಬೆಳಕು ನೀಡುವ ಮೂಲಕ ಜನಮನದ ಮುಂದೆ ತಂದು ಸೌಜನ್ಯತೆಯ ತಿಳಿವು ಬೀರಿ ನಡೆದಿದ್ದಾರೆ. ಮಾನವೀಯ ಹಿತದೃಷ್ಟಿಯನ್ನು ಕೈಬಿಡದೆ ಸಾಕಷ್ಟು ಬಗೆಯ ಆದರ್ಶ ಪಾಠಗಳನ್ನು ತಮ್ಮ ವಚನಗಳಲ್ಲಿ ತೋರಿ ಮರೆಯಾಗಿದ್ದಾರೆ. "ಎಲ್ಲಾ ವಿಚಾರಕ್ಕೂ ಸಮಾಜವನ್ನು ಶುಭ್ರಗೊಳಿಸುವವರು ಅಲ್ಲಿನ ಜನ. ಜನ ಮತ್ತು ನಡವಳಿಕೆ ಪರಿಶುದ್ಧವಾಗಿದ್ದರೆ ಆಗ ಸಮಾಜ ಸ್ವಚ್ಛಗೊಳ್ಳುತ್ತದೆಂಬುದು ಬಸವಣ್ಣನವರ ಏಕಮಾತ್ರ ಧ್ಯೇಯವಾಗಿತ್ತು. ಸಮಾಜವನ್ನು ಎಚ್ಚರಿಸಿ ಹೊಸ ತಿಳಿವಿನ ಹಾದಿಗೆ ತರಲು ಅವರ ವಚನ ಸಾಹಿತ್ಯ ಪರಿಣಾಮಕಾರಿಯಾದ ಜಾಗೃತಿಯನ್ನು" ಒಡಮೂಡಿಸಿದೆ.

ಸಮಾಜೋಪಯುಕ್ತ ಸಲಹೆ ಸೂಚನೆ ಹಾಗೂ ಬುದ್ಧಿ ಮಾತುಗಳನ್ನು ಇವರ ವಚನಗಳಲ್ಲಿ ಗಮನಿಸಬಹುದಾಗಿದೆ. ಈ ವಚನ ನೀತಿಗಳಿಂದ ಪರಿವರ್ತನೆಗೊಂಡು ಮಾನವ ತನ್ನ ಬದುಕುಗಳನ್ನು ಹಸನುಗೊಳಿಸಿಕೊಳ್ಳಲು ಅಪೂರ್ವ ಮಾರ್ಗದರ್ಶನಗಳು ದೊರಕುತ್ತವೆ, ಜನಸಾಮಾನ್ಯರಲ್ಲೂ ವಿಚಾರಶೀಲ ಸಂಗತಿಗಳನ್ನು ತುಂಬುತ್ತವೆ. ಮಾನವೀಯ ಜಾಗರೂಕತೆಯನ್ನು ಆದರ್ಶ ತತ್ತ್ವನೀತಿ ದೊರಕಿಸುವುದರ ಮೂಲಕ ನಾಡ ಜನತೆಯ ಮನೆ ಮನಗಳಿಗೆ ತುಂಬಿದರು. ವಚನ ಸಾಹಿತ್ಯದ ಚಾತುರ್ಯತೆ ಪರಿಣಾಮಕಾರಿಯಾಗಿ ಬೆಳೆಯಿತು. ಬುದ್ಧಿ ಜೀವಿಗಳಲ್ಲಿ ನೀತಿ ನಲಿವಿನ ಆದರ್ಶತೆಯನ್ನು ಜಾಗೃತಿಗೊಳಿಸಿತು. ವಿಚಾರದ ಹಾದಿಗೆ ಬಂದ ಇತರ ಶರಣ-ಶರಣೆಯರು ಕೂಡ ವಚನಗಳ ರಚನೆಯಲ್ಲಿ ತೊಡಗಿದರು. ಬದುಕಿನಲ್ಲಿ ಅಡಗಿರುವ ತಾತ್ವಿಕ ಚಿಂತನೆಯನ್ನು ವಚನಗಳಲ್ಲಿ ಬೆಳಕಾಗಿಸಿದರು. ಹೀಗೆ ಬಸವಣ್ಣನವರ ಸಾಮಾಜಿಕ ಕ್ರಾಂತಿಯು ಸೇವೆ ಬಹುಮುಖವಾಗಿ ಬೆಳೆದು, ಸಮಾಜಕ್ಕೆ ಹಿತಕರ ಸೇವೆಯನ್ನು ದೊರಕಿಸಿತು.



ಆಗಸ್ಟ್ ೨೩ ರಂದು ಕ್ಯಾತಸಂದ್ರದಲ್ಲಿ ಟಿಎಂಸಿಸಿ ಬ್ಯಾಂಕ್ ಎಟಿಎಂ ಅನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ಡಿಸಿಸಿ ಬ್ಯಾಂಕ್ ಅಧ್ಯಕ್ಷರಾದ ಶ್ರೀ ಕೆ.ಎನ್. ರಾಜಣ್ಣ, ಟಿಎಂಸಿ ಬ್ಯಾಂಕ್ ಅಧ್ಯಕ್ಷರಾದ ಡಾ. ಎನ್.ಎಸ್. ಜಯಕುಮಾರ್ ಅವರು ಉಪಸ್ಥಿತರಿದ್ದರು.







# ತುಮಕೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಹಿರಿಯ ವಿದ್ವಾಂಸ ಪ್ರೊ. ಕೋ.ರಂ. ಬಸವರಾಜು ಆಯ್ಕೆ



ಶ್ರೀ ಸಿದ್ಧಗಂಗಾ ಮಠದಲ್ಲಿ ಸೆಪ್ಟೆಂಬರ್ ೨೯-೩೦ ರಂದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಲಿರುವ ತುಮಕೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಹಿರಿಯ ವಿದ್ವಾಂಸರಾದ ಪ್ರೊ. ಕೋ.ರಂ. ಬಸವರಾಜು ಆಯ್ಕೆಯಾಗಿರುವುದಕ್ಕೆ 'ಸಿದ್ಧಗಂಗಾ' ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

**ಜನನ ಮತ್ತು ಶಿಕ್ಷಣ :** ಏಪ್ರಿಲ್ ೧೩, ೧೯೪೯ ರಂದು ತುಮಕೂರು ತಾಲ್ಲೂಕು ಕೋಡಿಹಳ್ಳಿಯಲ್ಲಿ ಶರಣ ದಂಪತಿಗಳಾದ ರಂಗಪ್ಪ ಮತ್ತು ಶ್ರೀಮತಿ ದೊಡ್ಡಕ್ಕ ಅವರ ಸುಪುತ್ರರಾಗಿ ಜನಿಸಿದರು. ಅವರದು ಸಂಪ್ರದಾಯಸ್ಥ ಸುಸಂಸ್ಕೃತ ರೈತ ಕುಟುಂಬ. ಸರಳತೆ, ಸಜ್ಜನಿಕೆ, ಮಾಡುವ ಕೆಲಸದಲ್ಲಿ ಶ್ರದ್ಧೆ, ಪ್ರಾಮಾಣಿಕತೆಯನ್ನು ಜೀವನದಲ್ಲಿ ಅಳವಡಿಸಿಕೊಂಡು ವೃತ್ತಿ ಜೀವನದಲ್ಲಿ ಸಾಧನೆಯ ಹೆಜ್ಜೆ ಗುರುತುಗಳನ್ನು ಮೂಡಿಸುತ್ತಾ ಬಂದಿದ್ದಾರೆ. ಪ್ರಾಥಮಿಕ ಶಿಕ್ಷಣವನ್ನು ಹುಟ್ಟಿದೂರಿನಲ್ಲಿ ಮುಗಿಸಿದ ನಂತರ ಶ್ರೀ ಸಿದ್ಧಗಂಗಾ ಮಠದಲ್ಲಿ ತ್ರಿವಿಧ ದಾಸೋಹಿ, ಮಾತೃಚೇತನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಹಾಗೂ ಮಾರ್ಗದರ್ಶನದಲ್ಲಿ ಸ್ನಾತಕೋತ್ತರ ಪದವಿಯವರೆಗೆ ಶಿಕ್ಷಣವನ್ನು ಪಡೆದರು. ಸಂಸ್ಕೃತ-ಕನ್ನಡ ಭಾಷೆಗಳಲ್ಲಿ ಸ್ನಾತಕೋತ್ತರ ಪದವಿ ಹಾಗೂ ವಿದ್ವತ್ ಪದವಿಯನ್ನು ಪಡೆದ ಶ್ರೀ ಬಸವರಾಜು ಅವರು ಪದವಿ ಹಾಗೂ ಪ್ರಶಿಕ್ಷಣ ಕಾಲೇಜುಗಳಲ್ಲಿ ಉಪನ್ಯಾಸಕರಾಗಿ, ನಂತರ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನಲ್ಲಿ ೩೮ ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ೨೦೦೭ ರಲ್ಲಿ ನಿವೃತ್ತಿ ಹೊಂದಿದ್ದರು. ವೃತ್ತಿಯಿಂದ ನಿವೃತ್ತರಾದರೂ, ಪ್ರವೃತ್ತಿಯಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

**ಸಾಹಿತ್ಯಕ್ಷೇತ್ರ :** ಶ್ರೀ ಬಸವರಾಜು ಅವರು ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ಇಪ್ಪತ್ತೆರಡಕ್ಕೂ ಹೆಚ್ಚು ಕೃತಿಗಳನ್ನು ಲೋಕಾರ್ಪಣೆ ಮಾಡಿದ್ದಾರೆ. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ ಭುವನಶ್ಲಾಘ್ಯಃ, ಬಸವಭಾಷೆ, ಸೇವಕ, ಶಿವಕುಮಾರ ಪ್ರಭುವೆ, ವೀರಶೈವ ಸಿದ್ಧಾಂತದ ಮೂರು ಚಿಂತನೆಗಳು, ಉದ್ದಾನೇಶ್ವರ ಲೀಲೆಗಳು, ಬಾಲಸಂಗಯ್ಯ, ಶೂನ್ಯಸಿಂಹಾಸನ, ದೇವರದೇವ, ವೀರಶೈವ-ಲಿಂಗಾಯತ್, ಬಸವಚಿಂತನೆ, ಶರಣರ ಸರಳ ವಿವಾಹವಿಧಿ, ಅಷ್ಟಾವರಣಗಳಲ್ಲಿ ಗುರು, ಶಿವಯೋಗದ ಶ್ರೀಗಿರಿ, ಶ್ರೀ ಶಿವಕುಮಾರ ಅಷ್ಟೋತ್ತರ ಶತನಾಮಾವಳಿ, ಶ್ರೀ ಶಿವಕುಮಾರ ಚಾರಿತ್ರಿ ಸಂಗ್ರಹ, ಇತ್ಯಾದಿ.

**ಸಂಪಾದಿತ ಕೃತಿಗಳು :** ಶ್ರೀ ಸಿದ್ಧಗಂಗಾಶ್ರೀ, ಸಂಗವ ಸಂಕಲ್ಪ, ಜಂಗಮಶ್ರೀ, ಸಿದ್ಧರಾಮ ಸಂಪುಟಗಳ ಸಹ ಸಂಪಾದಕರಾಗಿ, ಸಂಪಾದಕರಾಗಿ, ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.

**ವಿಚಾರ ಸಂಕೀರ್ಣಗಳಲ್ಲಿ :** ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದ ವಿಚಾರ ಗೋಷ್ಠಿಯಲ್ಲಿ ಮಹತ್ವಪೂರ್ಣವಾದ ಪುರಾಣಗಳಲ್ಲಿ ವೀರಶೈವ ದರ್ಶನ ಎಂಬ ಮೌಲಿಕ ಪ್ರಬಂಧವನ್ನು ಮಂಡಿಸಿ ವಿದ್ವಾಂಸರ ಪ್ರಶಂಸೆಗೆ ಪಾತ್ರರಾಗಿದ್ದಾರೆ ಅಲ್ಲದೆ ವಿಶ್ವವಿದ್ಯಾನಿಲಯ, ಸಾಹಿತ್ಯ ಸಮ್ಮೇಳನ ಹಾಗೂ ವಿವಿಧ ಸಂಘ ಸಂಸ್ಥೆಗಳು ಏರ್ಪಡಿಸಿದ್ದ ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸಿ ಪ್ರಾಜ್ಞರ ಮನ್ನಣೆಗೆ ಪಾತ್ರರಾಗಿದ್ದಾರೆ.

**ವಿವಿಧ ಸಮಿತಿಗಳಲ್ಲಿ :** ಪ್ರೊ. ಬಸವರಾಜು ಅವರು ಕನ್ನಡ ಪಂಡಿತ ಹಾಗೂ ಸಂಸ್ಕೃತ ಪಾಠಶಾಲೆಗಳ ಪಠ್ಯಪುಸ್ತಕ ಸಮಿತಿ ಹಾಗೂ ಪರೀಕ್ಷಾ ಮಂಡಳಿಯು ಸೇರಿದಂತೆ ಅನೇಕ ಸಂಘ ಸಂಸ್ಥೆಗಳ ಸದಸ್ಯರಾಗಿ, ಕಾರ್ಯದರ್ಶಿಯಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ.

**ಪ್ರಶಸ್ತಿ-ಪುರಸ್ಕಾರಗಳು :** ೧೯೯೯ ರಲ್ಲಿ ಕರ್ನಾಟಕ ಸರ್ಕಾರದಿಂದ 'ಉತ್ತಮ ಸಂಸ್ಕೃತ ಶಿಕ್ಷಕರು', ಶ್ರೀಮತ್ಕಾಶೀಪೀಠದಿಂದ 'ಸಾಹಿತ್ಯ ಸುಧಾಕರ' ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆಗೆ ಭಾಜನರಾಗಿದ್ದಾರೆ. ಶ್ರೀಯುತರು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಶ್ರೀ ಸಿದ್ಧಗಂಗಾ ಮಠ, ಶ್ರೀಮದ್ ರಂಭಾಪುರಿ ಮಠ, ಶ್ರೀಮದ್ ಶ್ರೀಶೈಲ ಮಠ, ಶಿವಗಂಗೆ, ಬೆಟ್ಟದಹಳ್ಳಿ ಮಠವೂ ಸೇರಿದಂತೆ ಅನೇಕ ಮಠಗಳು, ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿವೆ.



ಶ್ರದ್ಧಾಂಜಲಿ

# ಜಾನಪದ ವಿದ್ವಾಂಸ, ಸಾಹಿತಿ ಸಿದ್ಧಗಂಗಯ್ಯ ಕಂಬಾಳು ವಿಧಿವಶ



'ನಿಸರ್ಗಪ್ರಿಯ' ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದ ಹಿರಿಯ ಜಾನಪದ ವಿದ್ವಾಂಸ, ಸಾಹಿತಿ, ನಾಟಕಕಾರ ಶ್ರೀ ಸಿದ್ಧಗಂಗಯ್ಯ ಕಂಬಾಳು ಅವರು ದೀರ್ಘಕಾಲದ ಅನಾರೋಗ್ಯದಿಂದಾಗಿ ಆಗಸ್ಟ್ ೧೨ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೭೭ ವರ್ಷವಾಗಿತ್ತು. ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಕಂಬಾಳು ಗ್ರಾಮದಲ್ಲಿ ಮೇ ೧೦, ೧೯೪೫ ರಂದು ಶರಣ ದಂಪತಿಗಳಾದ ಬಸಪ್ಪ ಮತ್ತು ಶ್ರೀಮತಿ ಪುಟ್ಟಮ್ಮರವರ ಪುತ್ರರಾಗಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಕಂಬಾಳಿನಲ್ಲಿ ಪಡೆದ ಶ್ರೀ ಸಿದ್ಧಗಂಗಯ್ಯ ಅವರು ಬೆಂಗಳೂರು ವಿಶ್ವವಿದ್ಯಾಲಯದಿಂದ ಕನ್ನಡ ಸ್ನಾತಕೋತ್ತರ ಪದವಿಯನ್ನು ಪಡೆದರು.

ಚಿಕ್ಕಂದಿನಿಂದಲೂ ಜನಪದ ಸಾಹಿತ್ಯ, ರಂಗಭೂಮಿಯ ಬಗ್ಗೆ ಆಸಕ್ತಿಯನ್ನು ಹೊಂದಿದ್ದ ಶ್ರೀಯುತರು ಶಿವಗಂಗೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಜಾನಪದ ಗೀತೆ, ಒಗಟು, ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಕಾದಂಬರಿ, ಸಂಶೋಧನೆ, ನಾಟಕ, ಮಹಾಕಾವ್ಯ, ಜನಪದ ಗ್ರಂಥ ಸಂಪಾದನೆ ಮೊದಲಾದ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ್ದಾರೆ.

ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ, ಸುದೀರ್ಘಕಾಲ ಸೇವೆ ಸಲ್ಲಿಸಿದ್ದ ನಿಸರ್ಗಪ್ರಿಯ ಅವರು ಶಿಕ್ಷಣ ಇಲಾಖೆಯ ಸಹಾಯಕ ನಿರ್ದೇಶಕರಾಗಿ, ಕರ್ನಾಟಕ ನಾಟಕ ಅಕಾಡೆಮಿಯ ರಿಜಿಸ್ಟ್ರಾರ್ ಆಗಿ ಕಾರ್ಯನಿರ್ವಹಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದರು. ರಂಗಭೂಮಿಯ ಬಗ್ಗೆ ಆಸಕ್ತಿ ಮೂಡಲು ಕೊಂಡಜ್ಜಿಯಲ್ಲಿ ನಡೆದ ನಾಟಕ ಶಿಬಿರ ಕಾರಣವಾಯಿತು. ಅಲ್ಲಿ ಪಡೆದ ತರಬೇತಿಯಿಂದ ಹಲವು ನಾಟಕಗಳ ರಚನೆ ಮಾಡಿದರು. ರಂಗಭೂಮಿಯ ಬಗ್ಗೆ ಆಸಕ್ತಿ ಹೊಂದಿದ್ದ ಶ್ರೀಯುತರು 'ಗುಜ' ಎಂಬ ಕಂಪನಿಯ ನಾಟಕಗಳಲ್ಲಿ ಕೆಲ ವರ್ಷ ಅಭಿನಯಿಸಿದರು.

'ಮಾತಾಡು ಮಲ್ಲಿಗೆ', 'ಚಂದುಳ್ಳ ಮಕ್ಕಳ ಒಂಭತ್ತು ಕೊಡು ಸ್ವಾಮಿ', 'ಜುಂಜಪ್ಪನ ಕಾವ್ಯ' ಇವು ಇವರ ಜಾನಪದ ಗೀತೆಗಳ ಸಂಗ್ರಹಗಳು. ಇಲ್ಲಿಗರ ಸಂಸ್ಕೃತಿ ಎಂಬ ಉಪಸಂಸ್ಕೃತಿಯ ಅಧ್ಯಯನ ನಡೆಸಿದ್ದರು. ಶ್ರೀ ಕಂಚುಗಲ್ ಬಂಡೇಮಠ ಇತಿಹಾಸ ಮತ್ತು ಪರಂಪರೆ ಕುರಿತು ಸಂಶೋಧನಾ ಕೃತಿಯನ್ನು ರಚಿಸಿದ್ದರು. ಒಬ್ಬ ಉತ್ತಮ ನಾಟಕ ರಚನಾಕಾರರಾಗಿದ್ದರು. ಇವರ 'ಬೆನಕನಕೆರೆ' ಹಾಗೂ 'ತಿರುಕರಾಜ' ನಾಟಕಗಳು ನೂರಾರು ಪ್ರದರ್ಶನಗಳನ್ನು ಕಾಣುವ ಮೂಲಕ ಜನಪ್ರಿಯತೆಯನ್ನು ತಂದುಕೊಟ್ಟಿತ್ತು. ಇವರ ಅನೇಕ ನಾಟಕಗಳಿಗೆ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿ ಬಂದಿದೆ. 'ಅಲ್ಲಮ' ಚಲನಚಿತ್ರಕ್ಕೆ ಸಂಭಾಷಣೆ ಬರೆದಿದ್ದರು.

ಕರ್ನಾಟಕ ಜಾನಪದ ಅಕಾಡೆಮಿ ಪ್ರಕಟಿಸಿದ ಜಾನಪದ ನಿಘಂಟುವಿನ ಸಂಪಾದಕರಲ್ಲೊಬ್ಬರಾಗಿ ಸೇವೆ ಸಲ್ಲಿಸಿದ್ದರು. ಶಿಷ್ಟ ಹಾಗೂ ಜಾನಪದ ಸಾಹಿತ್ಯ ಎರಡರಲ್ಲೂ ಕೆಲಸ ಮಾಡಿದ್ದರು. ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದ ಸದ್ಭಕ್ತರೂ, ಪ್ರಥಮ ದರ್ಜೆ ಗುತ್ತಿಗೆದಾರರಾಗಿದ್ದ ಲಿಂ. ಡಿ. ರೇವಣಸಿದ್ಧಪ್ಪ ಅವರ ಅಳಿಯಂದಿರು ಹಾಗೂ ಪ್ರಥಮ ಗುತ್ತಿಗೆದಾರರಾಗಿದ್ದ ಲಿಂ. ಎಲ್. ರಾಜಪ್ಪನವರ ಷಡ್ಡಕರು. ಶ್ರೀ ನಿಸರ್ಗಪ್ರಿಯರ ನಿಧನ ಕನ್ನಡ ಜಾನಪದ, ನಾಟಕ ಕ್ಷೇತ್ರಗಳಿಗೆ ತುಂಬಲಾರದ ನಷ್ಟ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಶ್ರೀಸಿದ್ಧಗಂಗಾ ಗುರುಪರಂಪರೆ ನೀಡಲೆಂದು 'ಸಿದ್ಧಗಂಗಾ' ಶ್ರದ್ಧೆಯನ್ನು ಅರ್ಪಿಸುತ್ತದೆ.




ಪ್ರಾತಃಸ್ಮರಣೀಯರು

# ಗಾನಯೋಗಿ ಪಂಚಾಕ್ಷರ ಗವಾಯಿಗಳು.

– ಎಚ್.ಎಸ್. ಸಿದ್ಧಗಂಗಪ್ಪ *



ಕರ್ನಾಟಕ ಹಾಗೂ ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆ ಮಾಡಿ ವಿಶ್ವವಿಖ್ಯಾತರಾದ ಪಂಚಾಕ್ಷರ ಗವಾಯಿಗಳು ಹುಟ್ಟು ಕುರುಡರಾದರೂ ತಮ್ಮಂತೆಯೇ ಅಂಧರಾಗಿಯೇ ಭೂಮಿಗೆ ಬಂದ ಸಹಸ್ರಾರು ಜನರಿಗೆ ಸಂಗೀತ ಕಲಿಸಿ ಅವರ ಬಾಳಿಗೆ ಬೆಳಕಾದವರು. ಅವರು ದೂರದೃಷ್ಟಿಯಿಂದ ಪುಣ್ಯಾಶ್ರಮವನ್ನು ಸ್ಥಾಪಿಸಿ, ತನ್ಮೂಲಕ ಅಂಧ ಮಕ್ಕಳಿಗೆ ಆಶ್ರಯ ನೀಡಿ ಸಂಗೀತ ಕಲಿಸಿ ಯಾರಿಗೂ ಹೊರೆಯಾಗದೆ ಸ್ವಾವಲಂಬಿಯಾಗಿ, ಆತ್ಮಾಭಿಮಾನದಿಂದ ತಲೆ ಎತ್ತಿ ಬದುಕುವ ದಾರಿಯನ್ನು ತೋರಿಸಿಕೊಟ್ಟ ಮಹಾನ್ ಚೇತನ. ಅವರ ಸರಳತೆ, ಸಹೃದಯತೆ, ಮಾನವೀಯತೆ ಯುವ ಜನಾಂಗಕ್ಕೆ ಸ್ಫೂರ್ತಿಯ ಸೆಲೆ !

**"ಸಂಗೀತ ಶಾರದೆಗೆ ಕಣ್ಣಿತ್ತು ಹುಟ್ಟಿದೆ ನೀ ಕುರುಡನಾಗಿ**
**ಗಂಧದಂತೆಯೆ ಸವೆದು, ದೀಪದೊಲು ಉರಿದು,**
**ಹೂವಿನಂತರಳಿ ನಗುತ ಗೈದೆ ಜನಸೇವೆ,**
**ನಿನ್ನ ಸಂಗೀತ ಶಿವಗೀತೆ, ಜನರು ಬದುಕುವ ಗೀತ"**

ಕವಿ ಶಾಂತರಸರು ಲಿಂ. ಗಾನಯೋಗಿ ಪಂಚಾಕ್ಷರ ಗವಾಯಿಗಳನ್ನು ಕುರಿತ ಈ ನುಡಿಗಳು ಅವರ ದಿವ್ಯ ವ್ಯಕ್ತಿತ್ವಕ್ಕೆ ಹೊನ್ನಕಳಶವಿಟ್ಟಂತೆ. ಕನ್ನಡ ನಾಡಿನ ಸಂಗೀತ ಭೂಮಿಕೆಯಲ್ಲಿ ಕಂಡ ಗಾನಯೋಗದ ಒಂದು ದಿವ್ಯಕಿರಣ. ಜನ್ಮಾಂಧರರಾದ ಅವರ ಬದುಕು ಕಣ್ಣಿದ್ದವರಿಗೂ ಒಂದು ಆಶಾಕಿರಣ, ದಿವ್ಯಜ್ಯೋತಿ!

ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಕಾಡಶೆಟ್ಟಿಹಳ್ಳಿ ಗವಾಯಿಗಳ ಜನ್ಮಸ್ಥಳ. ಜನ್ಮ ದಿನಾಂಕ ಡಿಸೆಂಬರ್ ೩೧, ೧೯೧೧. ತಂದೆ ಗುರುಪಾದಯ್ಯ, ತಾಯಿ ನೀಲಮ್ಮ. ತೊಟ್ಟಿಲಲ್ಲಿ ಮಲಗಿಸಿ ಗುರು ಹಿರಿಯರು, ಬಂಧು ಬಳಗದವರ ಸಮ್ಮುಖದಲ್ಲಿ ಇಟ್ಟ ಹೆಸರು ಗದಿಗಯ್ಯ. ಅವರ ಅಣ್ಣ ಗುರುಬಸವಯ್ಯ. ವಿಧಿಲೀಲೆಯನ್ನು ಬಲ್ಲವರಾರು! ಅಣ್ಣ ತಮ್ಮಂದಿರಿಬ್ಬರು ಹುಟ್ಟುಕುರುಡರು. ಹುಟ್ಟಿದ ಎರಡು ಗಂಡು ಮಕ್ಕಳೂ ಅಂಧರೆಂದರೆ ಹೆತ್ತವರಿಗೆ ಆದ ನೋವು ಅಷ್ಟಿಷ್ಟಲ್ಲ. ಮಕ್ಕಳನ್ನು ನೋಡಿದಾಗಲೆಲ್ಲ ಕಣ್ಣೀರಧಾರೆ ಸುರಿಯುತ್ತಿತ್ತು. ಇದರ ಜೊತೆಗೆ ಕಿತ್ತು ತಿನ್ನುವ ಬಡತನ. ತಾವು ಉಪವಾಸವಿದ್ದು ತಮ್ಮ ತುತ್ತನ್ನೇ ಮಕ್ಕಳಿಗೆ ಉಣಿಸಿ ಬೆಳೆಸಿದರು. ಮಕ್ಕಳ ಭವಿಷ್ಯದ ಜವಾಬ್ದಾರಿಯನ್ನು ಸೃಷ್ಟಿಕರ್ತನಿಗೆ ವಹಿಸಿದರು. ಹೆತ್ತ ಒಡಲು ಇನ್ನೇನು ಮಾಡಲಾದೀತು.

ವಿಧಿಯ ಆಟವನ್ನು ಬಲ್ಲವರಾರು! ಗುರುಪಾದಯ್ಯನವರ ಮಕ್ಕಳ ದೃಷ್ಟಿಶಕ್ತಿಯನ್ನು ತನಗೇ ಬೇಕೆಂದು ಇಟ್ಟುಕೊಂಡಿದ್ದ ವಿಧಿಗೆ ತನ್ನ ತಪ್ಪಿನ ಅರಿವಾಗಿ ಅವರಿಬ್ಬರಿಗೆ ಇನಿದಾದ ಕಂಠ ಸಿರಿಯನ್ನು ಕೊಟ್ಟು ಕಳುಹಿಸಿದ. ಆದರೆ ಅವರ ಕಂಠಮಾಧುರ್ಯ ಹೆತ್ತವರ ಬಡತನಕ್ಕೆ ಆಸರೆಯಾಗುವ ಬದಲು ಹೊರೆಯಾದರು.

ಅಂಧ ಸೋದರರ ಪಾಲಿಗೆ ಬೆಳಕಾಗಿ ಬಂದವರು ಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಗಳು. ಒಮ್ಮೆ ಶಿವಯೋಗಿಗಳು ಕಾಡಶೆಟ್ಟಿಹಳ್ಳಿಗೆ ಬಂದಾಗ ತಂದೆ ಗುರುಪಾದಯ್ಯನವರು ಕಣ್ಣೀರು ಸುರಿಸುತ್ತಾ ಅಂಧ ಮಕ್ಕಳನ್ನು ತಂದು ಗುರುಗಳ ಮುಂದೆ ನಿಲ್ಲಿಸಿ ತಲೆಬಾಗಿ ಶರಣಾಗುತ್ತಾರೆ. ತಂದೆಯ ದುಃಖತಪ್ತ ಮನಸ್ಸಿನ ತಳಮಳವನ್ನು ತಿಳಿಯದೆ, ತಾವು ಕಲಿತ ಹಾಡುಗಳನ್ನು ಭಾವತುಂಬಿ ಇನಿದನಿಯಲ್ಲಿ ಹಾಡಿದಾಗ ಶಿವಯೋಗಿಗಳಿಗೆ ಹೃದಯ ತುಂಬಿ ಬರುತ್ತದೆ.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ಗುರುಪಾದಯ್ಯನವರ ಬಡತನದ ಬಗ್ಗೆ ಕೇಳಿ ಅವರ ಅಂತಃಕರಣ ಮರುಗುತ್ತದೆ. ಮನಸ್ಸಿನಲ್ಲಿಯೇ ದೃಢಸಂಕಲ್ಪ ಮಾಡಿದ ಶಿವಯೋಗಿಗಳು "ಇವರು ಚೆನ್ನಾಗಿ ಹಾಡುತ್ತಾರೆ. ನಮಗೆ ಒಪ್ಪಿಸು ಬಿಡು. ಇವರ ಜವಾಬ್ದಾರಿಯನ್ನು ನಾವು ವಹಿಸಿಕೊಳ್ಳುತ್ತೇವೆ" ಎಂದಾಗ ಗುರುಪಾದಯ್ಯನವರಿಗೆ ನಿಧಿಯೇ ಸಿಕ್ಕಿದಂತಾಗುತ್ತದೆ. ಇದರಿಂದ ಹೆತ್ತವರಿಗೆ ಅವರನ್ನು ನೋಡಿಕೊಳ್ಳುವ ಭಾರ ಕಡಿಮೆಯಾದಂತಾಯಿತು. ಸೋದರರಿಬ್ಬರೂ ಶ್ರೀ ಕುಮಾರ ಶಿವಯೋಗಿಗಳ ಕೃಪಾಶ್ರಮಕ್ಕೆ ಸೇರಿದರು.

ಸೋದರರಿಬ್ಬರಲಿ ಸುಪ್ತವಾಗಿದ್ದ ಅಪ್ರತಿಮ ಸಂಗೀತ ಪ್ರತಿಭೆಯನ್ನು ಸೂಕ್ಷ್ಮವಾಗಿ ಗಮನಿಸಿದ ಕುಮಾರ ಶಿವಯೋಗಿಗಳು ಅವರಿಗೆ ಸಂಗೀತ ಪಾಠಕ್ಕೆ ಸೂಕ್ತ ವ್ಯವಸ್ಥೆ ಮಾಡಿದರು. ವಿಧಿಲೀಲೆ! ಕೆಲವು ದಿನಗಳಲ್ಲಿಯೇ ಅಣ್ಣ ತೀರಿಕೊಂಡ. ಅಣ್ಣನ ಅನಿರೀಕ್ಷಿತ ಸಾವಿನಿಂದ ತಮ್ಮನ ದುಃಖದ ಕಟ್ಟೆ ಒಡೆಯಿತು. ಒಂಟಿಯಾದರೂ ಸಂಗೀತಾಭ್ಯಾಸದ ಬಗ್ಗೆ ಇದ್ದ ಶ್ರದ್ಧೆ, ಆಸ್ತಕಿಯಿಂದ ಅಣ್ಣನ ಅಗಲಿಕೆಯ ದುಃಖವನ್ನು ಮರೆತು ಸಂಗೀತವೇ ಅವರ ಸರ್ವಸ್ವವಾಯಿತು.

ಶಿರಾಳಕೊಪ್ಪದ ಪಂಡಿತ ಗದಿಗಯ್ಯ ಗವಾಯಿಗಳಲ್ಲಿ ಗದಿಗಯ್ಯ ಕರ್ನಾಟಕ ಸಂಗೀತಾಭ್ಯಾಸ ಮಾಡಿದರು. ಕೆಲವು ಕಾಲ ಮೈಸೂರಿನಲ್ಲಿ ಅಭ್ಯಾಸ ಮುಂದು ವರಿಸಿದರು. ಮುಂದೆ ಗದಿಗಯ್ಯ ಹಿಂದೂಸ್ತಾನಿ ಪದ್ಧತಿಯ ಬಗ್ಗೆ ಆಸಕ್ತಿ ತೋರಿದಾಗ, ಅವರ ಬಯಕೆಗೆ ನೀರೆರೆಯಲು ಕುಮಾರ ಶಿವಯೋಗಿಗಳು ಆಗಿನ ಪ್ರಸಿದ್ಧ ವಿದ್ವಾಂಸರಾದ ಮಿರ್ಜಿಂಯ ನೀಲಕಂಠ ಬುವಾ ಅವರನ್ನು ಬರಮಾಡಿಕೊಂಡು ಸಂಗೀತ ಪಾಠಕ್ಕೆ ವ್ಯವಸ್ಥೆ ಮಾಡಿದರು. ಶಿವಯೋಗಿಗಳ ಕಳಕಳಿ; ಕಾಳಜಿ ಫಲನೀಡಿತು. ಗದಿಗಯ್ಯ ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತಗಳೆರಡಲ್ಲೂ ಬಹುಬೇಗ ಸಿದ್ಧಿ ಪಡೆದರು. ದೇವರು ಒಂದನ್ನು ಕಿತ್ತುಕೊಂಡರೆ ಮತ್ತೊಂದನ್ನು ಕೊಡುತ್ತಾನೆ ಎಂಬುದಕ್ಕೆ ಗದಿಗಯ್ಯನವರು ಒಂದು ಜ್ವಲಂತ ನಿದರ್ಶನ. ಸಂಗೀತದಲ್ಲಿ ಅರ್ಪಣಾಭಾವದಿಂದ ತನ್ನನ್ನು ತೊಡಗಿಸಿಕೊಂಡಿದ್ದರಿಂದ ಸಂಗೀತ ದೇವತೆ ಒಲಿದಳು. ಸಂಗೀತ ಕಛೇರಿಗಳ ಮೂಲಕ ಬಹುಬೇಗ ಪ್ರಸಿದ್ಧರಾದರು. ೧೯೦೯ ರಲ್ಲಿ ಬಾಗಲಕೋಟೆಯಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭಾ ಅಧಿವೇಶನದಲ್ಲಿ ನೀಡಿದ ಸಂಗೀತ ಕಛೇರಿ ಗದಿಗಯ್ಯ ಅವರ ಜೀವನದಲ್ಲಿ ಶುಕ್ರದಸೆ ಆರಂಭವಾದಂತಾಯಿತು.

ಕುಮಾರ ಶಿವಯೋಗಿಗಳು ಗದಿಗಯ್ಯನವರಿಗೆ **'ಪಂಚಾಕ್ಷರ ಗವಾಯಿ'** ಎಂಬ ಹೊಸ ಅಭಿಧಾನ ನೀಡಿ ಆಶೀರ್ವದಿಸಿದರು. ಅಂದಿನಿಂದ ಅವರ ಹೆಸರು ಸಂಗೀತ ಕ್ಷೇತ್ರದಲ್ಲಿ ಅಜರಾಮರವಾಯಿತು.

ಪೂಜ್ಯ ಶ್ರೀ ಕುಮಾರ ಶಿವಯೋಗಿಗಳವರ ಆಶಯ ಮತ್ತು ನಿರೀಕ್ಷೆಗಳೆರಡೂ ಫಲ ನೀಡಿದವು. ಪಂಚಾಕ್ಷರ ಗವಾಯಿಗಳ ಹೆಸರು ಹತ್ತು ಕಡೆ ಪ್ರಚಾರವಾಯಿತು. ಗವಾಯಿಗಳಲ್ಲಿ ಸಂಗೀತ ಪ್ರತಿಭೆಯ ಜೊತೆಗೆ ಅವರಲ್ಲಿಯ ಸಂಘಟನಾ ಸಾಮರ್ಥ್ಯವನ್ನು ಶಿವಯೋಗಿಗಳು ಗುರುತಿಸಿದರು. ತಾವು ಈ ಮೊದಲೇ ಯೋಚಿಸಿದ್ದ ಸಂಗೀತ ಶಾಲೆಯ ಸ್ಥಾಪನೆಗೆ ಅವರನ್ನು ಬಳಸಿಕೊಂಡರು. ೧೯೧೪ ರಲ್ಲಿ ಧಾರವಾಡ ಜಿಲ್ಲಾ ನಿಡಗುಂದದಲ್ಲಿ ಸ್ಥಾಪಿತವಾದ ಶಿವಯೋಗ ಮಂದಿರ ಸಂಗೀತ ವಿದ್ಯಾಲಯದ ಮುಖ್ಯಸ್ಥರನ್ನಾಗಿ ಮಾಡಿ ಅವರ ಬಗ್ಗೆ ತಮಗಿದ್ದ ಪ್ರೀತಿಯನ್ನು ತೋರಿಸಿದರು. ಆ ಕಾಲದಲ್ಲಿ ಅದೊಂದು ವಿಶಿಷ್ಟ ಸಂಸ್ಥೆಯಾಗಿ ಪ್ರಾರಂಭವಾಯಿತೆಂದು ಹೇಳಬಹುದು. ಆ ಸಂಸ್ಥೆ ಪ್ರತಿಭಾವಂತರಾದ ಅನೇಕ ಅಂಧ ಕಲಾವಿದರಿಗೆ ಆಶ್ರಯ ನೀಡಿ ಭವಿಷ್ಯದಲ್ಲಿ ಸ್ವಾಭಿಮಾನದಿಂದ ಜೀವನ ಕಟ್ಟಿಕೊಳ್ಳಲು ನೆರವಾಯಿತು.

ಪಂಚಾಕ್ಷರ ಗವಾಯಿಗಳು ಕನ್ನಡ ನಾಡಿನಲ್ಲಿ ಹಿಂದೂಸ್ತಾನಿ ಸಂಗೀತದ ಪ್ರಸಾರಕ್ಕೆ ಅವರು ನೀಡಿದ ಕಾಣಿಕೆ ಸ್ಮರಣಿಯ. ಅವರದು ಸಮಾಜ ಮತ್ತು ಕಲಾ ಸೇವೆಗಾಗಿಯೇ ತಮ್ಮನ್ನು ಅರ್ಪಿಸಿಕೊಂಡ ಮಹಾಚೇತನ. "ಅವರು ಸಂಗೀತವನ್ನು ವಿಲಾಸ ಸಾಧನೆಯೆಂದು ಭಾವಿಸದೆ, ಕೇವಲ ಮನರಂಜನೆಗೆ ಬಳಸದೆ ಅದನ್ನು ಮನಶುದ್ಧಿಗಾಗಿ ಬಳಸಬೇಕು" ಎಂದು ಗುರುಗಳು ಹೇಳಿದ ಮಾತುಗಳನ್ನು ಸದಾ ನೆನಪಿನಲ್ಲಿಟ್ಟುಕೊಂಡಿದ್ದರು. ಸಮಾಜ ಮತ್ತು ಕಲಾ ಸೇವೆಗಾಗಿಯೇ ತಮ್ಮನ್ನು ಅರ್ಪಿಸಿಕೊಂಡ ಅವರು ಸಂಗೀತ ಸೇವೆಯನ್ನು **'ಶಿವಪೂಜೆ'** ಎಂದೇ ಭಾವಿಸಿದ್ದರು.

ಹಿರಿಯ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪ ಅವರು ಹೇಳಿರುವಂತೆ 'ಪಂಚಾಕ್ಷರ ಗವಾಯಿಗಳದ್ದು ಹೋರಾಟದ ಬದುಕು. ಎಂತಹ ಕಷ್ಟ ಬಂದೊದಗಿದರೂ ಎದೆಗೆಡದ ಆತ್ಮಗೌರವವನ್ನು ಬಿಟ್ಟು ಕೊಡದ ಕೆಚ್ಚು ಅವರದು. ಅವರ ಸಾಧನೆಗಳಲ್ಲಿ "ನಭೂತ ನಭವಿಷ್ಯತಿ" ಎನ್ನಬಹುದಾದ ಒಂದು ಅನನ್ಯ ಸಾಧನೆ ಎಂದರೆ ಸಂಚಾರಿ ಸಂಗೀತ ಶಾಲೆ. ನೂರಾರು ಕಲಾಭ್ಯಾಸಿ



ವಿದ್ಯಾರ್ಥಿಗಳನ್ನು ಜೊತೆಗೂಡಿಕೊಂಡು ಹಳ್ಳಿ ಹಳ್ಳಿಗೆ ಕಾಲ್ನಡಿಗೆಯಲ್ಲಿ ಹೋಗುತ್ತಿದ್ದ ಅವರು ಕ್ರಿಯಾಶೀಲತೆ ನಿಜಕ್ಕೂ ಸೋಜಿಗಪಡುವಂಥಹುದು. ನಾಡಿನ ನಾನಾ ಭಾಗಗಳಿಂದ ಬಂದು ಸೇರಿಕೊಳ್ಳುತ್ತಿದ್ದ ಆ ಕಲಾಸಕ್ತ ವಿದ್ಯಾರ್ಥಿಗಳಿಗೆಲ್ಲ ಉಚಿತ ಅನ್ನ, ಬಟ್ಟೆ ಒದಗಿಸಿ, ಉಚಿತ ಪಾಠ ಹೇಳಿ ಕೊಡುವುದೆಂದರೆ ಸಾಮಾನ್ಯವಲ್ಲ. ಗವಾಯಿಗಳು ಹಳ್ಳಿಗಳಿಗೆ ಗುಂಪಿನೊಡನೆ ಹೋದಾಗ ಮನೆ ಮನೆಗಳಲ್ಲಿ ಭಿಕ್ಷೆಯೆತ್ತಿ ಆ ಮಕ್ಕಳ್ಳನ್ನೆಲ್ಲ ಸಾಕಿಕೊಂಡು ಸಂಜೆ ಉಳಿದಡೆಯಲ್ಲೇ ಪುರಾಣ, ಕೀರ್ತನ ಮತ್ತು ಸಂಗೀತ ಕಾರ್ಯಕ್ರಮಗಳನ್ನು ನಡೆಸಿ, ನಂತರ ವಿದ್ಯಾರ್ಥಿಗಳಿಗೆ ಸಂಗೀತ ಪಾಠ ಹೇಳಿಕೊಡುತ್ತಿದ್ದರಂತೆ. ಬಹುಶಃ ಇಂತಹ ಉದಾಹರಣೆ ಮತ್ತೊಂದು ಸಿಗಲಾರದು." ಗೊರುಚ ಅವರ ಈ ಮಾತುಗಳು ಪಂಚಾಕ್ಷರ ಗವಾಯಿಗಳ ಮಾನವೀಯ ವ್ಯಕ್ತಿತ್ವಕ್ಕೆ ಮೆರಗು ನೀಡುತ್ತವೆ.

ಗವಾಯಿಗಳು ತಾವು ಕುರುಡರಾದರೂ, ಕುರುಡುತನ ಬದುಕಿಗೆ ಅಡ್ಡಿಯಾಗಬಾರದೆಂದು ಭಾವಿಸಿ ಸಂಗೀತ ಸಾಧನೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡ ಸಂಗೀತ ದೇವತೆಯ ಆರಾಧಕರು. ಜೊತೆಗೆ ತನ್ನಂತ ಕುರುಡರಾಗಿರುವವರಿಗೆ ಸಂಗೀತದ ಮೂಲಕ ಬದುಕು ಕಟ್ಟಿಕೊಳ್ಳಲು ದಾರಿತೋರಿದ ಹೃದಯವಂತರು. ಪಂಚಾಕ್ಷರ ಗವಾಯಿಗಳು ಸ್ಥಾಪಿಸಿದ ಸಂಚಾರಿ ಸಂಗೀತ ಶಾಲೆಯನ್ನು ಕಂಡು ವಚನ ಪಿತಾಮಹ ಎಂಬ ಗೌರವಕ್ಕೆ ಪಾತ್ರರಾಗಿದ್ದ, ಪ್ರಸಿದ್ಧ ಸಂಶೋಧಕರಾಗಿದ್ದ ಫ.ಗು. ಹಳಕಟ್ಟಿಯವರು ಹೇಳಿರುವ ಮಾತುಗಳು "ಪಂಚಾಕ್ಷರ ಗವಾಯಿಗಳು ಈ ಸಂಚಾರಿ ಸಂಗೀತ ಶಾಲೆಯ ಮೂಲಕ ಜನತೆಯಲ್ಲಿ ಗಾನ ಪ್ರೇಮವನ್ನು ಹುಟ್ಟಿಸುತ್ತಿದ್ದಾರೆ. ಉತ್ತರ ಕರ್ನಾಟಕದಲ್ಲಿ ಈ ಬಗೆಯ ಕಾರ್ಯ ಮಾಡುವ ಸಂಸ್ಥೆಯೆಂದರೆ ಇದೊಂದೇ" ಎಂದಿರುವುದು ಅರ್ಥಪೂರ್ಣವಾಗಿದೆ.

ಸದುದ್ದೇಶವನ್ನಿಟ್ಟುಕೊಂಡು ಪ್ರಾರಂಭಿಸಿದ ಕಾರ್ಯ ಕೆಲವು ವೇಳೆ ಸಂಕಷ್ಟಕ್ಕೀಡು ಮಾಡುವುದುಂಟು. ಅಂತೆಯೇ ಗವಾಯಿಗಳು ಈ ಸಂಗೀತ ಶಾಲೆಯನ್ನು ನಡೆಸುವಾಗ ಅನೇಕ ಬಾರಿ ಆರ್ಥಿಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಒಮ್ಮೆ ಬರಗಾಲ ಬಂದಾಗ ಪರಿಸ್ಥಿತಿ ತೀರ ಹದಗೆಟ್ಟಿತು. ಆಗ ಆಪ್ತರು ಸಂಗೀತ ಶಾಲೆಗೆ ರಜೆಕೊಟ್ಟು ಅವರವರ ಊರುಗಳಿಗೆ ಕಳುಹಿಸುವುದು ಸೂಕ್ತವೆಂದು ಸಲಹೆ ಕೊಟ್ಟರು. ದಿಕ್ಕು ದೆಸೆಯಿಲ್ಲದ ವಿದ್ಯಾರ್ಥಿಗಳನ್ನು ನಡುನೀರಿನಲ್ಲಿ ಕೈಬಿಡುವುದಕ್ಕೆ ಗವಾಯಿಗಳು ಒಪ್ಪಲಿಲ್ಲ. ಆಗ ಅವರು ಸಲಹೆ ನೀಡಿದವರಿಗೆ "ನಾನು ಉಪವಾಸವಿದ್ದರೂ ಚಿಂತೆಯಿಲ್ಲ. ನನ್ನ ತಂಬೂರಿಯ ತಂತಿಯನ್ನು ಮಾರಿಯಾದರೂ ಮಕ್ಕಳನ್ನು ಸಲಹುತ್ತೇನೆ" ಎಂದು ಹೇಳಿದಾಗ ಸಲಹೆ ನೀಡಿದವರು ಮೂಕವಿಸ್ಮಿತರಾದರಂತೆ !

ಕಷ್ಟಗಳು ಎದುರಾದಾಗ ಧೃತಿಗೆಡಲಿಲ್ಲ. ಬಂದುದ್ದೆಲ್ಲ ಬರಲಿ ಶಿವನ ದಯೆಯಿರಲಿ ಎಂದು ಭಾವಿಸಿದ ಗವಾಯಿಗಳು ಪದೇ ಪದೇ ಎದುರಾಗುತ್ತಿದ್ದ ಆರ್ಥಿಕ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾದರು. ಅದರ ಫಲವೇ "ಶ್ರೀ ಕುಮಾರೇಶ್ವರ ಕೃಪಾಪೋಷಿತ ನಾಟ್ಯ ಸಂಘ" ಎಂಬ ಸಂಸ್ಥೆಯ ಸ್ಥಾಪನೆ. ನಾಟಕ ಕೇವಲ ಮನರಂಜನೆಯ ಮಾಧ್ಯಮವಷ್ಟೇ ಅಲ್ಲ. ಸಾಮಾಜಿಕ ಶಿಕ್ಷಣಕ್ಕೂ ಪರಿಣಾಮಕಾರಿ ಮಾಧ್ಯಮವೆಂಬುದನ್ನು ಅರ್ಥಮಾಡಿಕೊಂಡಿದ್ದ ಗವಾಯಿಗಳು ತಮ್ಮ ವಿದ್ಯಾರ್ಥಿಗಳಿಂದಲೇ ನಾಟಕಗಳನ್ನು ಆಡಿಸಿ ಆದಾಯಕ್ಕೆ ದಾರಿ ಮಾಡಿದರು. ಇದರಿಂದ ಆರ್ಥಿಕ ಮುಗ್ಗಟ್ಟಿನಿಂದ ಬಳಲುತ್ತಿದ್ದ ಸಂಗೀತ ಶಾಲೆಗೆ ನಾಟ್ಯ ಸಂಘ ನೆರವಾಯಿತು, ನೆರಳಾಯಿತು. ವಿದ್ಯಾರ್ಥಿಗಳ ಹೊಟ್ಟೆ ಹಸಿವು ಹಿಂಗುವಂತಾಯಿತು.

ಪಂಚಾಕ್ಷರ ಗವಾಯಿಗಳು ಸಂಗೀತ ಕ್ಷೇತ್ರಕ್ಕೆ ಸಲ್ಲಿಸುತ್ತಿದ್ದ ಅನನ್ಯ ಸೇವೆಯನ್ನು ಕಂಡು ಪ್ರಭಾವಿತರಾಗಿ ಆ ಕಾಲದ ಸುಪ್ರಸಿದ್ಧ ರಂಗಭೂಮಿ ಕಲಾವಿದ ಗರುಡ ಸದಾಶಿವರಾಯರು ಕಳುಹಿಸಿದ ಅಭಿನಂದನ ಸಂದೇಶದಲ್ಲಿ "ತಮ್ಮ ಉತ್ಕಟವಾದ ಕಲಾಪ್ರೇಮಕ್ಕೆ ಮಹಾತಪಸ್ವಿಗಳಾದ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರ ಆಶೀರ್ವಾದ, ಒಲವಿರುವುದರಿಂದ ಭೌತಿಕ ನಯನವಿಹೀನರಾದ ತಾವು ದಿವ್ಯವಾದ ಜ್ಞಾನಚಕ್ಷುಗಳನ್ನು ಪಡೆದವರಾಗಿ ಅಖಂಡ ಜನತಾ ಜನಾರ್ಧನನ ಸೇವೆ ಮಾಡುತ್ತಾ ಧನ್ಯರೆಂದೆನಿಸಿದ್ದೀರಿ" ಎಂದು ಮನದುಂಬಿ ಹೇಳಿದ್ದಾರೆ.

**ಶರಣರ ವಚನಗಳಿಗೆ ಸ್ವರಪ್ರಸ್ತಾರ :** ಬಸವಾದಿ ಶರಣರ ವಚನಗಳಿಗೆ ಸ್ವರಪ್ರಸ್ತಾರ ಹಾಕಿ ಅವನ್ನು ಲಯಬದ್ಧವಾಗಿ ಹಾಡಬಹುದೆಂಬುದನ್ನು ತೋರಿಸಿದ ಮೊದಲ ಶ್ರೇಯಸ್ಸು ಹಾಗೂ ಹಾಡುಗಾರಿಕೆಯಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿದ ಹೆಗ್ಗಳಿಕೆ ಗವಾಯಿಗಳಿಗೆ ಸಲ್ಲುತ್ತದೆ. ಅವರು ಶ್ರೇಷ್ಠ ಮಟ್ಟದ ಕೀರ್ತನಕಾರರೂ

ಆಗಿದ್ದರು. ಅಂತೆಯೇ ಗಾಯನದ ಜೊತೆಗೆ ಹಾರ್ಮೋನಿಯಂ, ತಬಲಾ, ವೀಣೆ, ಪಿಟೀಲು, ಸೀತಾರ ಮೊದಲಾದ ಅನೇಕ ವಾದ್ಯಗಳನ್ನು ನುಡಿಸುವ ಪರಿಣಿತ ಕಲಾವಿದರಾಗಿದ್ದರು. ತಬಲಾ ವಾದನದಲ್ಲಿ ಅವರದು ವಿಶಿಷ್ಟ ಶೈಲಿ.

**ಬಿರುದು-ಪ್ರಶಸ್ತಿಗಳು** : ಗವಾಯಿಗಳ ಸಂಗೀತ ಪ್ರತಿಭೆಗೆ ಮಾರುಹೋದ ಅನೇಕ ಸಂಘ ಸಂಸ್ಥೆಗಳು, ಅಭಿಮಾನಿಗಳು ಉಭಯಗಾನವಿಶಾರದ, ಗಾನಕಲಾನಿಧಿ, ಸಂಗೀತ ರತ್ನ, ಸಂಗೀತ ಸಾಮ್ರಾಟ, ಗಾಯಕ ಪರಮಗುರು, ಸಂಗೀತಸಾಗರ, ಗಾಯನಾಚಾರ್ಯ, ಗಾನಯೋಗಿ, ಲಲಿತಕಲಾ ಪಿತಾಮಹ, ಸಂಗೀತ ಶಿವಯೋಗಿ, ಭೂ ಗಂಧರ್ವಚಂದ್ರ, ಹೀಗೆ ಹತ್ತಾರು ಪ್ರಶಸ್ತಿಗಳನ್ನಿತ್ತು ಮನತುಂಬಿ ಹಾಡಿ ಹೊಗಳಿದ್ದಾರೆ. ಅವರಲ್ಲಿದ್ದ ಸಂಗೀತ ಕಲಾ ಶ್ರೀಮಂತಿಕೆಗೆ ಎಷ್ಟು ಪ್ರಶಂಸಿಸಿದರೂ ಕಡಿಮೆಯೆ!

**ಸಂಗೀತ ಶಾಲೆ ಸ್ಥಳಾಂತರ** : ಅನಿವಾರ್ಯ ಕಾರಣಗಳಿಂದ ಶಿವಯೋಗ ಮಂದಿರ ಸಂಗೀತ ಶಾಲೆಯು ಗದುಗಿಗೆ ಸ್ಥಳಾಂತರಗೊಳ್ಳುವ ಸಂದರ್ಭ ಬಂದೊದಗಿತು. ಆ ಸಂದರ್ಭದಲ್ಲಿ (೧೯೪೦) ನೆರವಾದ ಸಂಗೀತ ಪ್ರೇಮಿ, ಮಹಾದಾನಿ ಗದುಗಿನ ಶ್ರೀಮಂತರಾದ ಬಸರೀಗಿಡದ ಶ್ರೀ ವೀರಪ್ಪನವರ ಆರ್ಥಿಕ ನೆರವಿನಿಂದ 'ವೀರಶೈವ ಪುಣ್ಯಾಶ್ರಮ' ಎಂಬ ಹೆಸರಿನಲ್ಲಿ ರೂಪುಗೊಂಡು ನಡೆಯುತ್ತಿರುವ ಪಂಚಾಕ್ಷರ ಗವಾಯಿಗಳ ಸಂಗೀತ ಶಾಲೆ, ಕನ್ನಡ ನಾಡಿನಲ್ಲಷ್ಟೇ ಅಲ್ಲ, ಇಡೀ ಭಾರತದಲ್ಲಿ ಒಂದು ವಿಶಿಷ್ಟ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಜಾತಿ, ವರ್ಗ ಭೇದವಿಲ್ಲದೆ ಸಂಗೀತ ಕಲೆಯಲ್ಲಿ ಆಸಕ್ತಿ, ಒಲವುಳ್ಳ ಎಲ್ಲರಿಗೂ ಕಲಿಯಲು ಮುಕ್ತ ಅವಕಾಶ ಕಲ್ಪಿಸಬೇಕು ಎಂಬ ಸಂಸ್ಥಾಪಕರ ಆಶಯಕ್ಕೆ ಭಂಗವಾಗದಂತೆ ನೋಡಿಕೊಳ್ಳಲಾಗುತ್ತಿದೆ. ಲಿಂಗೈಕ್ಯ ಪಂಚಾಕ್ಷರ ಗವಾಯಿಗಳ ಪಟ್ಟಶಿಷ್ಯರಾದ ಪುಟ್ಟರಾಜ ಗವಾಯಿಗಳ ಆಶೀರ್ವಾದದ ಮುಂಬೆಳಕಿನಲ್ಲಿ ಪುಣ್ಯಾಶ್ರಮ ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ಪಂಚಾಕ್ಷರ ಗವಾಯಿಗಳು ತಮ್ಮ ಸಂಗೀತ ಶಾಲೆಯಲ್ಲಿ ಗಾಯನ ಶಿಕ್ಷಣದ ಜೊತೆಗೆ ವಿದ್ಯಾರ್ಥಿಗಳ ಒಲವು ಮತ್ತು ಪ್ರತಿಭೆಗಳಿಗೆ ಅನುಗುಣವಾಗಿ ಕೀರ್ತನ, ವಾದನ, ನಾಟಕಾಭಿನಯ ಮೊದಲಾದ ಕಲೆಗಳಲ್ಲಿಯೂ ತರಬೇತಿಗೆ ಅವಕಾಶ ಕಲ್ಪಿಸಿದ್ದರು. ಸಂಗೀತದೊಂದಿಗೆ ಕನ್ನಡ, ಸಂಸ್ಕೃತ ಸಾಹಿತ್ಯದ ಬಗೆಗೂ ಶಿಕ್ಷಣವೂ ಅಗತ್ಯವೆಂದು ಭಾವಿಸಿದ್ದ ಗುರುಗಳ ಆಶಯದಂತೆ ಶಾಲೆಯ ವಿದ್ಯಾರ್ಥಿಗಳಿಗೆ ಸಂಸ್ಕೃತದಲ್ಲಿ ರಘುವಂಶ ಮೊದಲಾದ ಪಂಚ ಕಾವ್ಯಗಳು; ಕನ್ನಡದಲ್ಲಿ ರಾಜಶೇಖರ ವಿಲಾಸ, ಜೈಮಿನಿ ಭಾರತ ಮೊದಲಾದ ಕಾವ್ಯಗಳ ಅಭ್ಯಾಸಕ್ಕೆ ಪಠ್ಯ ಕ್ರಮದಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಅಂಧರಿಗಾಗಿಯೇ ಬ್ರೈಲ್‌ಲಿಪಿ ಸೌಲಭ್ಯವಂತೂ ಮೊದಲೇ ಇತ್ತು.

**ಗವಾಯಿಗಳ ಕನ್ನಡಾಭಿಮಾನ** : ಗವಾಯಿಗಳ ಮಾತೃಭಾಷಾ ಅಭಿಮಾನ ಅನನ್ಯವಾದವು. ಕನ್ನಡವನ್ನು ಹೆತ್ತ ತಾಯಿ ಎಂದೇ ಭಾವಿಸಿದ್ದರು. ಒಮ್ಮೆ 'ಹಿಸ್ ಮಾಸ್ಟರ್ಸ್ ವಾಯ್ಸ್' ಕಂಪನಿಯವರು ಅವರ ಗಾಯನದ ಧ್ವನಿಮುದ್ರಿಕೆ ತಯಾರಿಸಲು ಮುಂಬಯಿಗೆ ಕರೆಸಿ ಕೊಂಡರು. ಹಿಂದೂಸ್ತಾನಿ ಭಾಷೆಯಲ್ಲಿ ಹಾಡಬೇಕೆಂದು ಕಂಪನಿಯವರು ಸೂಚನೆ ನೀಡಿದರು. ಆದರೆ ಅವರ ಸೂಚನೆಯನ್ನು ತಿರಸ್ಕರಿಸಿದರು. "ಮಾಡಿದರೆ ಕನ್ನಡದಲ್ಲಿ ಮಾಡಿ, ಇಲ್ಲವಾದರೆ ಬಿಡಿ" ಎಂದು ಕಟುವಾಗಿಯೇ ನುಡಿದರು. ಅವರಿಂದ ಹಾಡಿಸಲೇಬೇಕು ಎಂಬ ಆಶಯವನ್ನಿಟ್ಟುಕೊಂಡಿದ್ದ ಕಂಪನಿಯವರಿಗೆ ಬೇರೆ ದಾರಿಯೇ ಇರಲಿಲ್ಲ. ಕನ್ನಡದಲ್ಲಿಯೇ ಹಾಡುವಂತೆ ಹೇಳಿದರು. ಗವಾಯಿಗಳು 'ಧ್ಯಾನವ ಮಾಡೋ ನಿಜಗುರು' ಎಂಬ ಘನಮಠಾರ್ಯರು ಮೊದಲಾದ ಶರಣರ ಪದಗಳನ್ನೇ ಹಾಡಿ ಕನ್ನಡಾಭಿಮಾನವನ್ನು ಮೆರೆದರು.

**ವೀರಶೈವ ತತ್ತ್ವನಿಷ್ಠೆ** : ಪಂಚಾಕ್ಷರ ಗವಾಯಿಗಳ ವೀರಶೈವ ತತ್ತ್ವ ಸಿದ್ಧಾಂತದ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಅವರಿಗೆ ಅಷ್ಟಾವರಣವೇ ಅಂಗವಾಗಿತ್ತು. ಪಂಚಾಕ್ಷರವೇ ಪ್ರಾಣವಾಗಿತ್ತು. ಷಟಸ್ಥಲವೇ ಮಾರ್ಗವಾಗಿರುವ ವೀರಶೈವ ತತ್ತ್ವಾಚರಣೆ ಯಲ್ಲಿ ತುಂಬ ನಿಷ್ಠೆಯನ್ನಿಟ್ಟುಕೊಂಡಿದ್ದರು. ಬಹುಶಃ ಸ್ವಾಮಿಗಳೆನಿಸಿಕೊಂಡವರಿಗಿಂತಲೂ ಮಿಗಿಲಾದ ನಡೆ, ನುಡಿ ಅವರದಾಗಿತ್ತು. ಅವರು ಸತ್ಯಶುದ್ಧ ಕಾಯಕ ಜೀವಿಯಾಗಿದ್ದರು. ಆಶ್ರಯ ಬೇಡಿ ಬಂದ ಪ್ರತಿಯೊಬ್ಬ ಅಂಧ ಕಲಾವಿದನಲ್ಲಿ ಶಿವನ ಸ್ವರೂಪವನ್ನೇ ಅಂತರಂಗದಲ್ಲಿ ಕಂಡ ಮಹಾಶಿವಯೋಗಿ. ಸಂಯಮ ಶಕ್ತಿ, ವಿಷಯ ವಿರಕ್ತಿ, ಸದ್ಗುರು ಭಕ್ತಿ, ಇವು ಗವಾಯಿಗಳ ಬದುಕಿನ ಸೂತ್ರಗಳಾಗಿದ್ದವು. ವಿದ್ಯಾರ್ಥಿಗಳನ್ನು ಸಂಗೀತದ ಜೊತೆಗೆ ಸುಸಂಸ್ಕೃತ ವ್ಯಕ್ತಿಗಳನ್ನಾಗಿ ರೂಪಿಸಲು ಅವರು ತಾಳಿದ ಕಾಳಜಿ, ವಹಿಸಿದ ಎಚ್ಚರ ಅನುಪಮವಾದದ್ದು. ಪಂಚಾಕ್ಷರ ಗವಾಯಿಗಳು



ವಾಸ್ತವವಾಗಿ ಸಚ್ಚಾರಿತ್ರ್ಯ, ತತ್ತ್ವನಿಷ್ಠೆ, ಲೋಕಕಲ್ಯಾಣ ದೃಷ್ಟಿ, ವಿಶಾಲಭಾವನೆ, ಕ್ರಿಯಾಶೀಲತೆ, ಜೀವಕಾರುಣ್ಯ, ದೈವೀಶ್ರದ್ಧೆ ಇವೆಲ್ಲದರ ಮೊತ್ತವಾಗಿದ್ದರು. ಅವರದು ಅಪರೂಪದ ಘನ ಶಿವವ್ಯಕ್ತಿತ್ವ.

**ಗವಾಯಿಗಳ ಕಾಯಕ ನಿಷ್ಠೆ** : ಬಸವಾದಿ ಶರಣರ ಕಾಯಕ ನಿಷ್ಠೆಯನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಕ್ಕೆ ತರುತ್ತಿದ್ದರು. ಒಮ್ಮೆ ಅವರ ಸಂಚಾರಿ ಸಂಗೀತ ತಂಡ ಹಾವೇರಿಯಲ್ಲಿತ್ತು. ಆ ಸಂದರ್ಭದಲ್ಲಿ ಆರ್ಥಿಕ ಸಮಸ್ಯೆಯನ್ನು ಎದುರಿಸುತ್ತಿದ್ದರು. ಅವರ ಸಂಕಷ್ಟವನ್ನು ಕಂಡ ಕೆಲವು ಅಭಿಮಾನಿಗಳು ಸಹಾನುಭೂತಿಯಿಂದ ಸಹಾಯಧನ ಸಂಗ್ರಹಿಸಲು ಗವಾಯಿಗಳೊಡನೆ ಸಮಾಲೋಚಿಸಿದಾಗ ಅವರು "ಸಹಾಯ ಕೊಡಿಸಬೇಕೆಂದಿದ್ದರೆ ನನ್ನ ಗಾಯನ ಏರ್ಪಡಿಸಿ. ಕಾಯಕ ಮಾಡದೆ ಹಣ ಪಡೆಯುವುದಿಲ್ಲ' ಎಂದು ಹೇಳುವ ಮೂಲಕ ಜನರಿಗೆ ಶರಣರ ಸಂದೇಶವನ್ನು ನೀಡಿದರು. ಅವರೆಂದೂ ಕಷ್ಟಕ್ಕೆ ಹೆದರಿ ಕಾಯಕ ಬಿಟ್ಟವರಲ್ಲ. ಕಾಯಕ ಅವರ ಜೀವನದ ಅವಿಭಾಜ್ಯ ಅಂಗವಾಗಿತ್ತು.

**ಶಿಷ್ಯ ಪರಂಪರೆ** : ಪಂಚಾಕ್ಷರ ಗವಾಯಿಗಳದು ಗ್ವಾಲಿಯರ್ ಘರಾನ ಪದ್ಧತಿಯಲ್ಲಿ ಎದ್ದು ಕಾಣುವ ಹೆಸರು. ಅವರು ಇಂದು ನಮ್ಮ ಕಣ್ಣುಮುಂದೆ ಇಲ್ಲದೇ ಹೋದರೂ, ಅವರಿಂದ ಬದುಕಿನ ಕಣ್ಣು ಪಡೆದ ನೂರಾರು ಜನ ಪ್ರತಿಭಾವಂತ ಕಲಾವಿದರು ನಾಡಿನ, ರಾಷ್ಟ್ರದ ಸಂಗೀತ ಪ್ರಿಯರ ಗಮನ ಸೆಳೆದಿದ್ದಾರೆ. ಅವರಲ್ಲಿ ಕೆಲವರನ್ನಾದರೂ ಹೆಸರಿಸಬಹುದಾದರೆ ಮೊದಲು ಕೇಳಿಬರುವ ಹೆಸರೆಂದರೆ ಡಾ. ಪುಟ್ಟರಾಜ ಗವಾಯಿಗಳು. ಜೊತೆಗೆ ಡಾ. ಬಸವರಾಜ ಗುರು, ಪಂ. ಪಂಚಾಕ್ಷರಿ ಮತ್ತಿಗಟ್ಟಿ, ಪಂ. ಆರ್.ವಿ. ಶೇಷಾದ್ರಿ ಗವಾಯಿ, ಪಂ. ಸಿದ್ಧರಾಮ ಜಂಬಲದಿನ್ನಿ, ಬಸವರಾಜ ಪುರಾಣಿಕ, ಗುರು ಬಸವಾರ್ಯ ಹಿರೇಮಠ, ಶಂಕರರಾವ್ ದೀಕ್ಷಿತ್, ಜಯದೇವ ಹವಾಯಿ, ಚಿತ್ತರಗಿ ಗಂಗಾಧರ ಶಾಸ್ತ್ರಿ, ಗುಡೂರು ರಂಗಪ್ಪ ಮಾಸ್ತರ, ಅರ್ಜುನಸಾ ನಾಕೋಡ್, ಬಸವರಾಜು ತಾಳಕೇರಿ, ಎಲ್ಲಪ್ಪ ಅಮರಗೋಳ, ಮರಿಯಪ್ಪ ರೋಣ, ಸಿದ್ಧೇಶ್‌ಕುಮಾರ್ ತೆಲಗಿ, ಮೃತ್ಯುಂಜಯ ಪುರಾಣಿಕ ಮಠ, ಹೀಗೆ ಎಷ್ಟೋ ಹಿರಿಯ ಪ್ರತಿಭಾವಂತ ಪ್ರಖ್ಯಾತ ಕಲಾವಿದರನ್ನು ಹೆಸರಿಸಬಹುದು. ಇವರೆಲ್ಲ ಸಂಗೀತ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಪಾರ.

ಪಂಚಾಕ್ಷರ ಗವಾಯಿಗಳನ್ನು ಸದಾ ಸ್ಮರಿಸುವಂತೆ ಮಾಡುತ್ತಿರುವ ಸಂಸ್ಥೆ ಗದುಗಿನ ವೀರೇಶ್ವರ ಪುಣ್ಯಾಶ್ರಮ. ೧೯೪೦ ರಲ್ಲಿ ಪಂಚಾಕ್ಷರ ಗವಾಯಿಗಳು ತಮ್ಮ ಪ್ರೀತಿಯ ಶಿಷ್ಯರಾದ ಪುಟ್ಟರಾಜ ಗವಾಯಿಗಳನ್ನು ಸಂಸ್ಥೆಯ ಮುಖ್ಯಸ್ಥರನ್ನಾಗಿ ನೇಮಕ ಮಾಡಿದಾಗ ಅವರು ಈ ಜವಾಬ್ದಾರಿಯನ್ನು ಹೊರಲು ಹಿಂಜರಿದಾಗ, ಅವರಲ್ಲಿ ಆತ್ಮಸ್ಥೈರ್ಯವನ್ನು ತುಂಬಿ "ಕಷ್ಟಗಳನ್ನೆಲ್ಲಾ ನಾನೇ ಅನುಭವಿಸಿದ್ದೇನೆ. ನಿನ್ನ ಪಾಲಿಗೆ ಉಳಿದಿರುವುದು ಸುಖ ಮಾತ್ರ" ಎಂದು ಹೇಳುವುದರ ಮೂಲಕ ಅವರಲ್ಲಿ ಕಾಡುತ್ತಿದ್ದ ಸಂಶಯ, ಅಳುಕನ್ನು ನಿವಾರಿಸಿದರು. ಅವರ ಪರಿಶ್ರಮದ ಬದುಕಿನ ಪರಿಚಯಕ್ಕೆ ಈ ಒಂದು ಮಾತು ಸಾಕು ಎನಿಸುತ್ತದೆ.

**ಲಿಂಗೈಕ್ಯ** : ಪಂಚಾಕ್ಷರ ಗವಾಯಿಗಳು ತಮ್ಮ ಸೇವೆಯ ಹಾದಿಯಲ್ಲಿ ಹೂವಿಗಿಂತ ಮುಳ್ಳುಗಳನ್ನೇ ತುಳಿದಿದ್ದು ಹೆಚ್ಚು. ಅವರು ಹೆಜ್ಜೆ ಹೆಜ್ಜೆಗೂ ಅಡೆ ತಡೆಗಳನ್ನು ಎದುರಿಸಬೇಕಾಯಿತು. ಆದರೆ ಅಷ್ಟೇ ಪ್ರಮಾಣದಲ್ಲಿ ಪ್ರೀತಿ, ವಿಶ್ವಾಸಗಳನ್ನು ಗಳಿಸಿದ್ದರು. ಆದರೆ ಅವರು ಸಂತೋಷವಾದಾಗ ಹಿಗ್ಗದೆ, ಕಷ್ಟಬಂದಾಗ ಕುಗ್ಗದೆ ಸಮಚಿತ್ತದಿಂದ ಸ್ಥಿತಪ್ರಜ್ಞರಾಗಿ ತಮ್ಮಷ್ಟಕ್ಕೆ ತಾವು ಲೋಕಜಂಗಮದ ಸೇವೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡು ೧೯೪೪ ರಲ್ಲಿ ತಮ್ಮ ಇಹದ ಬದುಕಿಗೆ ಮಂಗಳ ಹಾಡಿದರು. ಮಾನವ ಲೋಕದ ಸಂಗೀತ ಕಾಯಕದ ಮಂಗಳೋದ್ಯಾನದ ಪುಷ್ಪವೊಂದು ಶಿವನಿಗೆ ಅರ್ಪಿತವಾಯಿತು.

**ಶ್ರೀವಾಣಿ**

ಸಾರ್ವಜನಿಕರಿಂದ ಬಂದ ಹಣ ತುಂಬ ಪವಿತ್ರವಾದದ್ದು. ಅದನ್ನು ಖರ್ಚು ಮಾಡುವಲ್ಲಿ ಪೂರ್ವಾಪರ ಚಿಂತನೆ ಮಾಡಲೇ ಬೇಕಾಗುತ್ತದೆ. ಹಣವನ್ನು ನೀರಿನಂತೆ ಗಳಿಸಬೇಕು. ತೀರ್ಥದಂತೆ ಬಳಸಬೇಕು ಎಂಬ ಅನುಭವವಾಣಿ ಸದಾ ನೆನಪಿನಲ್ಲಿರಬೇಕು.





ಪರಿಚಯ

# ಸಾಧ್ವಿಶಿರೋಮಣಿ ಹೇಮರೆಡ್ಡಿ ಮಲ್ಲಮ್ಮ

- ನಾ.ಮ. ಬಸವರಾಜಯ್ಯ *

ಶಿವಶರಣ, ಶರಣೆಯರಿಗೆ ಹೊತ್ತು ಗೊತ್ತುಗಳಿಲ್ಲ, ನಿದ್ರೆ, ನೀರಡಿಕೆಗಳಿಲ್ಲ, ಸಾಕು-ಬೇಕುಗಳಿಲ್ಲ, ಆಸೆ-ಪಾಸೆಗಳಿಲ್ಲ. ಖೇದ-ಮೋದಗಳಿಲ್ಲ, ಭಾಗ-ವಿಭಾಗಳಿಲ್ಲ, ನೊರೆ-ತೆರೆಗಳ ಆಂಜಿಕೆಯಿಲ್ಲ. 'ಜಾಣನು ಲೌಕಿಕ, ಪಾರಮಾರ್ಥನು ಮಾಣದೆ ಕೂಡಿ ನಡೆಸುತಿಹನು' ಎಂಬ ನಿಜಗುಣ ಶಿವಯೋಗಿಗಳ ಅಮೃತ ವಾಣಿಯನ್ನು ತಮ್ಮ ಜೀವನದಲ್ಲಿ ಸಾಧಿಸಿ, ತೋರಿಸಿದವರಾಗಿದ್ದರು. ನೇರ ನುಡಿ, ನಡೆವುಳ್ಳವರಾಗಿ, ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ಅಂತರಂಗ ಬಹಿರಂಗದಲ್ಲಿ ಆಚಾರ ವಿಚಾರಶೀಲರಾಗಿ, ಎಲ್ಲ ಧರ್ಮದವರನ್ನು ಮಾನ್ಯ ಮಾಡಿ ಸದುವಿನಯವುಳ್ಳವರಾಗಿ, ಸಚ್ಚಾರಿತ್ರವಂತರಾಗಿ ಸದುಹೃದಯ ಸಂಪನ್ನರಾಗಿ, ಆಧ್ಯಾತ್ಮದ ಆಕಾಶದಲ್ಲಿ ಮಿನುಗುವ ತೇಜಃಪುಂಜವಾಗಿ ನಕ್ಷತ್ರಗಳಂತೆ ೧೨ನೆಯ ಶತಮಾನದಲ್ಲಿ ಶಿವಶರಣ-ಶರಣೆಯರು ಮಿನುಗಿದರು.

ಸಾಮಾನ್ಯವಾಗಿ ಇತಿಹಾಸದ ವಿಷಯವೆಂದರೆ ಏಕಾಭಿಪ್ರಾಯ ಇರುವುದು ವಿರಳ. ರೆಡ್ಡಿ ಜನಾಂಗದ ಬಗ್ಗೆ ನಾವು ತಿಳಿಯಬೇಕಾದರೆ, ಅಪಾರ ಸಾಹಿತ್ಯವಿದೆ. ಅಂಕಿ ಅಂಶಗಳ ದಾಖಲೆಯೂ ಇದೆ. "ರೆಡ್ಡಿ ರಾಜ್ಯಗಳ ಚರಿತ್ರೆ" ಎಂಬ ಗ್ರಂಥದ ಪ್ರಕಾರ ರೆಡ್ಡಿ ಜನಾಂಗವನ್ನು ಹದಿನಾಲ್ಕು ಶಾಖೆಗಳಲ್ಲಿ ಗುರುತಿಸಲಾಗಿದೆ. ವಿಶೇಷವಾಗಿ ರೆಡ್ಡಿ ಮನೆತನದವರು ರಾಜ್ಯವಾಳಿದ್ದು, ಆಂಧ್ರ ರಾಜ್ಯವನ್ನು ಬಲಪಡಿಸಲು ಹೋರಾಡಿದವರಾಗಿದ್ದರು.

ರೆಡ್ಡಿ ವಂಶದ ೪ನೆಯ ಅರಸುಕುಮಾರ ಗಿರಿರೆಡ್ಡಿಯು ಆಳ್ವಿಕೆಯಲ್ಲಿ ನಿರಸನ ಹೊಂದಿ ಸಿದ್ದಾಪುರವೆಂಬ ಗ್ರಾಮದಲ್ಲಿ ನೆಲಸಿದವನೆಂದೂ; ಅವನೇ ಹೇಮರೆಡ್ಡಿ ಎಂದೂ, ಅವನ ಸೊಸೆಯಾದ ನರಸಾಂಬೆಯೇ ಮಲ್ಲಮ್ಮನೆಂದೂ ಹೇಳಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದ ಖಚಿತವಾದ ಮಾಹಿತಿ ದೊರೆತಿಲ್ಲ.



ಚನ್ನಕವಿಗಳ ಪುರಾಣದ ಆಧಾರದಿಂದಲೂ ಇತರ ಪ್ರಾಜ್ಞರ ಅನಿಸಿಕೆಯಿಂದ ನೋಡಿದಾಗ, ಶ್ರೀಶೈಲದ ಬಳಿಯಲ್ಲಿ ಸಿದ್ಧಾಪುರವೆಂಬ ಗ್ರಾಮದೊಳಗೆ ಹೇಮರೆಡ್ಡಿಯೆಂಬ ಒಬ್ಬ ಗೃಹಸ್ಥನಿದ್ದನು. ಇವನಿಗೆ ಪದ್ಮೆ ಎಂಬುವಳು ಹೆಂಡತಿ ಇದ್ದಳು. ಮನೆಯಲ್ಲಿ ಬಡತನವಿದ್ದರೂ ಆತ ಪ್ರೇಮದಿಂದ ಸಂಸಾರ ಮಾಡುತ್ತಿದ್ದನು. ಅವನಿಗೆ ಶಿವನ ಕರುಣೆಯಿಂದ ಐದು ಮಂದಿ ಗಂಡು ಮಕ್ಕಳಾದರು. ಅವರಿಗೆ ಯೌವನ ಪ್ರಾಪ್ತವಾಗಲು ಮದುವೆ ಮಾಡಿದ, ಮನೆಗೆ ಬಂದ ಸೊಸೆಯರಲ್ಲಿ ಮಧ್ಯದವಳು; ಮೂರನೆ ಮಗನ ಹೆಂಡತಿ ಮಲ್ಲಮ್ಮ. ಭರಮರೆಡ್ಡಿಯೊಂದಿಗೆ ಕ್ರಿ.ಶ. ೧೪೪೪ ರಲ್ಲಿ ಮದುವೆಯಾಯಿತೆಂದು ತಿಳಿದುಬರುತ್ತದೆ. ಆಕೆ ಸ್ಫುರದ್ರೂಪಿಯಾಗಿದ್ದಳು. ಪರಮಪಾತಿವ್ರತ್ಯ ಸಂಪನ್ನೆಯಾಗಿದ್ದಳು. ಲೌಕಿಕ ಚಮತ್ಕಾರಗಳನ್ನು ಅರಿಯದ ಮುಗ್ಧೆಯಾಗಿದ್ದಳು, ಭಕ್ತಿವಂತಳಾಗಿದ್ದಳು. ಇಂಥ ಸದ್ಗುಣ ಸಂಪನ್ನೆಯನ್ನು ಕಂಡು ನೆಗೆವೆಣ್ಣೆಯರು ಸೇರದೆ ಇಲ್ಲದ್ದೊಂದು ಹುಟ್ಟಿಸಿ ಹೇಳಿ ಹೇಳಿ

* ನಾಗರಹಾಳು, ಹಚ್ಚೊಳ್ಳಿ ಮಾರ್ಗ, ಸಿರಗುಪ್ಪ ತಾ. ಬಳ್ಳಾರಿ ಜಿ.





ಅತ್ತೆಗೆ ಈಕೆಯ ವಿಷಯದಲ್ಲಿ ಸಿಟ್ಟು ತರಿಸಿದರು. ಅತ್ತೆಯು ಹಿಂದು ಮುಂದು ವಿಚಾರ ಮಾಡದೆ ಮನೆ ಬಿಡಿಸಿ ದನಗಳನ್ನು ಕಾಯಲಿಕ್ಕೆ ಮಲ್ಲಮ್ಮನನ್ನು ನೇಮಿಸಿದಳು. ಅತ್ತೆಯ; ಅಪ್ಪಣೆಯಂತೆ ದನಗಳನ್ನು ಕಾಯ್ದು ಅಡವಿಯಿಂದ ಹಸಿದು ಮನೆಗೆ ಬಂದರೆ ಕನಿಕರವಿಲ್ಲದೆ ಅತ್ತೆಯೂ ನೆಗೆವೆಣ್ಣೆಯರೂ ಹಳಸಿದ ಅನ್ನವನ್ನು ಕೊಡುತ್ತಿದ್ದರು. ಈಕೆಯು ಮನಸ್ಸಿನಲ್ಲಿ ಖೇದಗೊಳ್ಳದೆ ಅದನ್ನೇ ಮೃಷ್ಟಾನ್ನವೆಂದು ಭಾವಿಸಿ, ಅಡವಿಗೆ ಒಯ್ದು ದನದಹಟ್ಟಿಗೆ ಸಮೀಪದಲ್ಲಿ ಇದ್ದ ಶ್ರೀ ಮಲ್ಲಿಕಾರ್ಜುನನಿಗೆ ನಿವೇದಿಸಿ ಊಟ ಮಾಡುತ್ತಿದ್ದಳು. ಇದರಂತೆ ಅಸಾಧಾರಣ ಭಕ್ತಿಯಿಂದ ಸೇವಿಸಿ, ಮಲ್ಲಮ್ಮನು ಮಲ್ಲಿಕಾರ್ಜುನನ ಪ್ರಸಾದವನ್ನು ಪಡೆದು, ಅನಂತ ಮಹತ್ವಗಳನ್ನು ಜಗತ್ತಿನಲ್ಲಿ ಮಾಡಿ ತೋರಿಸಿ ಕೀರ್ತಿ ಪಡೆದು ರೆಡ್ಡಿ ಕುಲವನ್ನು ಉದ್ಧರಿಸಿ ಮುಕ್ತಳಾದ ಇತಿಹಾಸವಿದು. ನೀತಿ, ಧರ್ಮ, ಸಮಾಧಾನ, ಸಮದರ್ಶನ ಬುದ್ಧಿ, ಸ್ತ್ರೀ ಧರ್ಮ, ಶಿವಶಕ್ತಿವಿರತ ಜ್ಞಾನಗಳು ಮಲ್ಲಮ್ಮಳ ಅಸಾಧಾರಣ ಬುದ್ಧಿಶಕ್ತಿಯಿಂದ ಹೊರಹೊಮ್ಮಿದವು. ರೆಡ್ಡಿ ಕುಲದಲ್ಲಿ ಅನೇಕ ಭೇದಗಳಿದ್ದರೂ ಇಡೀ ರೆಡ್ಡಿ ಕುಲದ, ಏಳಿಗೆಯನ್ನು ಪಡೆದಿರುವುದರಿಂದ ಮಲ್ಲಮ್ಮನನ್ನು ಅವರೆಲ್ಲರೂ ಭಜಿಸುತ್ತಾರೆ.

ಹೇಮರೆಡ್ಡಿ ಮಲ್ಲಮ್ಮ ಸಂಸಾರವನ್ನು ತ್ಯಜಿಸದೆ, ಆದರಲ್ಲಿದ್ದುಕೊಂಡೆ ಬದುಕಿನ ಕಣ್ಣೀರು ನೋವುಗಳನ್ನು ಸಹನೆಯಿಂದ ಸಹಿಸಿಕೊಂಡು, ತಾನು ಸೊಸೆಯಾಗಿದ್ದ ಮನೆಯ ಘನತೆ ಗೌರವಗಳನ್ನು ಕಾಪಾಡಿದ ಗೃಹಧರ್ಮಿಣಿ. ಆ ತಾಯಿ ತನ್ನ ಭಕ್ತಿ, ಶಕ್ತಿಗಳ ಬಲದಿಂದ ಇಡೀ ಸಮುದಾಯಕ್ಕೆ ಸುಖ ಸಂಪತ್ತುಗಳನ್ನು ತನ್ನ ಆರಾಧ್ಯ ದೈವವಾದ ಮಲ್ಲಿಕಾರ್ಜುನನಿಂದ ವರವಾಗಿ ಪಡೆದುಕೊಂಡಳು. ಸ್ವಂತ ಸುಖಕ್ಕಿಂತ ಸಮಷ್ಟಿ ಸುಖವೇ ಮೇಲಾದುದೆಂದು ಭಾವಿಸಿ ಅದರಂತೆ ನಡೆದುಕೊಂಡಳು.

ಏಸುಕ್ರಿಸ್ತನು ಕ್ರೈಸ್ತ ಧರ್ಮವನ್ನು, ಮಹಮದ್ ಪೈಗಂಬರ್ ಇಸ್ಲಾಂ ಧರ್ಮವನ್ನು, ಗೌತಮ ಬುದ್ಧನು ಬೌದ್ಧ ಧರ್ಮವನ್ನು, ವರ್ಧಮಾನ ಮಹಾವೀರನು ಜೈನ ಧರ್ಮವನ್ನು, ಬಸವಣ್ಣನವರು ಲಿಂಗಾಯತ ಧರ್ಮವನ್ನು, ಇನ್ನೂ ಹೀಗೆ ಅನೇಕ ಮಹಾತ್ಮರು, ಸಂತರು ಬೇರೆ ಬೇರೆ ಧರ್ಮಗಳನ್ನು ಸ್ಥಾಪಿಸಿದರು. ಮಾನವನು ಯಾವುದೇ ರೀತಿಯಿಂದ ಆ ಧರ್ಮವನ್ನು ಆಚರಿಸಿದರೆ ಮುಕ್ತಿ ಪಡೆಯಬಹುದಾಗಿದೆ.

ಆದರೆ ಶ್ರೀಶೈಲ ಪ್ರಾಂತದ ಹೇಮರೆಡ್ಡಿ ಮಲ್ಲಮ್ಮನು ಯಾವ ಧರ್ಮವನ್ನು ಅಸ್ತಿತ್ವಕ್ಕೆ ತರಲಿಲ್ಲ. ಯಾವ ಹೊಸ ಧರ್ಮವನ್ನು ಸ್ಥಾಪಿಸಲಿಲ್ಲ. ಆದರೆ ತಾತ್ತ್ವಿಕ ಧರ್ಮಗಳಿಗೆ ಭಿನ್ನವಾದ, ತನ್ನ ಆದರ್ಶ ಜೀವನದ ಮೂಲಕ 'ಗೃಹಿಣಿ ಧರ್ಮ'ವನ್ನು ವಿಶ್ವಕ್ಕೆ ತಿಳಿಸಿದ ಮಹಾಸಾಧ್ವೀ ಮಲ್ಲಮ್ಮ. ಯಾವ ಉಪದೇಶವನ್ನು ಉಪದೇಶಿಸಲಿಲ್ಲ. ಏನಾದರೂ ಉಪದೇಶಿಸಿದ್ದರೆ, ಹೆಣ್ಣು ಮಕ್ಕಳು ಹೇಗೆ ನಡೆದುಕೊಳ್ಳಬೇಕು, ಎಷ್ಟೇ ಕಷ್ಟ ತೊಂದರೆಗಳು ಬಂದರೆ ಸಂಸಾರವನ್ನು ಹೇಗೆ ಮಾಡಬೇಕು, ಸ್ತ್ರೀಯರ ಜವಾಬ್ದಾರಿಗಳ ಬಗ್ಗೆ ಹೇಳಿರಬಹುದು. ಯಾವ ಸಾಹಿತ್ಯವನ್ನು ರಚಿಸಲಿಲ್ಲ. ಆಕೆಯ ಬದುಕು ಅಮರ ಸಂದೇಶವಾಗಿದೆ, ಅಗತ್ಯವಿರುವವರಿಗೆ ಬೇಡಿದ್ದನ್ನು ಕೊಡುವಷ್ಟು ದೈವಶಕ್ತಿ ಹೊಂದಿದ, ಕರುಣಾಮಯಿ ಆ ತಾಯಿ 'ಸದ್ಗೃಹಸ್ಥೆ' ಎನ್ನುವುದಕ್ಕೆ ನಿದರ್ಶನವಾಗಿದ್ದಳು.

**ಮಲ್ಲಮನ ಪವಾಡಗಳು :** ಹೇಮರೆಡ್ಡಿ ಮನೆಯ ಸಂಪತ್ತು ಕರಗಿ ಮತ್ತೆ ವೃದ್ಧಿಯಾಗಿದ್ದು ಮಲ್ಲಮ್ಮನ ನಿಷ್ಕಳಂಕ ಭಕ್ತಿಯಿಂದ ಒಂದು ದಿನ ಹೊಲದಲ್ಲಿ ಬಿತ್ತಲು ಮಲ್ಲಮ್ಮ ಬುಟ್ಟಿಯಲ್ಲಿ ಬಿತ್ತನೆ ಕಾಳುಗಳನ್ನು ತುಂಬಿಕೊಂಡು ಹೋದಳು. ದಾರಿಯಲ್ಲಿ ಓರ್ವ ಜಂಗಮ ಬಂದು, ತಾಯಿ ಈ ಕಾಳುಗಳನ್ನು ನನಗೆ ಬೇಕೆಂದು ಬೇಡಿಕೊಂಡ, ದಾನಮಾಡಿ ಮರಳನ್ನು ತುಂಬಿಕೊಂಡು ಮಲ್ಲಿಕಾರ್ಜುನನ ಧ್ಯಾನ ಮಾಡುತ್ತಾ ಬಿತ್ತಿದರೆ, ಕೆಲವು ದಿನಗಳಲ್ಲಿ ಅಸಾಧಾರಣವಾಗಿ ಬೆಳೆದು, ಕಣ ಮಾಡಿದಾಗ, ಕಣಜವೆಲ್ಲಾ ತುಂಬಿ ತುಳುಕುವಂತಾಯಿತು.

ಹೇಮರೆಡ್ಡಿಯ ನಾಲ್ಕನೇ ಮಗ ವೇಮರೆಡ್ಡಿ ಯೌವನದಲ್ಲಿ ದೃಢಕಾಯನೂ ಸ್ಫುರದ್ರೂಪಿಯೂ ಆಗಿದ್ದನು. ಆದರೆ ಅವಿಚಾರಿಯಾಗಿ ವೇಶ್ಯೆಯ ಸಹವಾಸದಲ್ಲಿ ಹಗಲು ರಾತ್ರಿ ಅಲ್ಲೇಕಾಲ ಕಳೆಯುತ್ತಿದ್ದನು. ಸೂಳೆಯನ್ನು ನಂಬಿ ಹಾಳಾಗಿ ಹೋಗಿದ್ದ ವೇಮರೆಡ್ಡಿಗೆ ಮಲ್ಲಮ್ಮ ಘನವೈರಾಗ್ಯ ಉಂಟಾಗುವಂತೆ ಮಾಡಿದುದು ಸಾಮಾನ್ಯ ಕೆಲಸವೇ?

ಮಲ್ಲಮ್ಮನು ಕಾದಕವಡಿಯನ್ನು ಬಿತ್ತಿಸಿ ಹೊನ್ನುಗಳನ್ನು ಬೆಳೆಸಿ, ಸದ್ಬೋಧೆಯನ್ನು ಮಾಡಿ ಅವರನೆಲ್ಲ ಸಂಪತ್ತಿನಲ್ಲಿರಿಸಿದುದು, ಹರಿಯ ಭಕ್ತನಾದ ಕಾಳಿದಾಸನು ಶ್ರೀಗಿರಿಯನ್ನು ನೋಡಬಾರದೆಂದು, ಛಲದಿಂದ ಕಣ್ಣನ್ನು ಕಳೆದುಕೊಂಡು ಮಲ್ಲಮ್ಮನಿಂದ ಮತ್ತೆ ಕಣ್ಣು ಪಡೆದುದು. ಮಲ್ಲಮ್ಮನು ಮಾವನಿಗೆ ಕಣ್ಣುಗಳ

ರಾಶಿಯನ್ನು ತೋರಿಸಿ, ಅಂಧರಿಗೆಲ್ಲ ಕಣ್ಣುಗಳನ್ನು ಕೊಟ್ಟು ಅವರನ್ನು ಶಿವಭಕ್ತರನ್ನಾಗಿ ಮಾಡಿದುದು. ಮಲ್ಲಮ್ಮ ಮಾವನಿಗೆ ಮಲ್ಲಿಕಾರ್ಜುನನ್ನು ತೋರಿಸಿ ಕಿಟ್ಟದ ಕುಳಿಯನ್ನು ಹೊನ್ನಾಗಿಸಿ ದೇವಾಲಯ ಮತ್ತು ದಾರಿಗಳನ್ನು ನಿರ್ಮಿಸಿದುದು. "ದೇವಾ ಸಮಸ್ತ ವಿಷಯಗಳು ನೀನೇ ಆಗಿರುವೆ, ನನಗೆ ಯಾವ ಸಂಪತ್ತು ಬೇಡ. ಆದರೂ ನನ್ನ ಆಶಯ ಒಂದಿದೆ. ಈಡೇರಿಸ ಬೇಕೆಂದು" ಬೇಡುತ್ತೇನೆ. 'ಧರಣಿಯಲ್ಲಿ ಮೆರೆಯುವ ನನ್ನ ರೆಡ್ಡಿ ವಂಶಕ್ಕೆ ಎಂದಿಗೂ ಬಡತನ ಬರಬಾರದು. ಸದಾ ಅವರು ಸಂಪತ್ತಿನಿಂದ ಬಾಳುವೆ ಮಾಡುವಂತೆ ಅನುಗ್ರಹಿಸಬೇಕು' ಎಂದು ಬೇಡಿಕೊಂಡಳು. ಆಗ ಮಲ್ಲಿಕಾರ್ಜುನನು 'ನಿನ್ನ ಬೇಡಿಕೆ ಈಡೇರಿದೆ, ನಿನಗೆ ಕೈಲಾಸದಲ್ಲಿ ಶರಣ ಪದವಿ ದೊರಕಲಿ' ಎಂದು ಅನುಗ್ರಹಿಸಿ, ಲಿಂಗದಲ್ಲಿ ಅಂತರ್ಧಾನನಾದನು.

ಸಾಧ್ವಿಶಿರೋಮಣಿ ಹೇಮರೆಡ್ಡಿ ಮಲ್ಲಮ್ಮ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಮಹಿಳೆಯೂ ಹೌದು. ಮೂರು ಕಾಲದಲ್ಲಿ ಬೆಳಗುವ ದಿವ್ಯಜ್ಯೋತಿ, ಜ್ಞಾನದಿಂದ ಸುಜ್ಞಾನಕ್ಕೆ, ವಿಜ್ಞಾನದಿಂದ ಪ್ರಜ್ಞಾನಕ್ಕೆ; ಪರೋಕ್ಷಕ್ಕಿಂತ ಅಪರೋಕ್ಷ ಜ್ಞಾನಿಯಾಗಿ, ಕಂಗೊಳಿಸಿ, ನಾಸ್ತಿಕರನ್ನು ಆಸ್ತಿಕರನ್ನಾಗಿ ಮಾಡಿ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಶ್ರೀಶೈಲ ಕ್ಷೇತ್ರ ಅತ್ಯಂತ ಮಹಿಮೋನ್ನತವಾದ, ಜಾಗೃತಸ್ಥಾನವಾಗಿ ಆಬಾಲವೃದ್ಧರಿಗೆ ಜಾಗೃತ ಸ್ಥಾನವಾಗಿ ಇರಲು ಸಾಧ್ವಿಶಿರೋಮಣಿ ಮಲ್ಲಮ್ಮಳೇ ಕಾರಣೀಭೂತಳೆಂದರೆ ತಪ್ಪಲ್ಲ.

೧೨ನೇ ಶತಮಾನದಲ್ಲಿ ಅಕ್ಕಮಹಾದೇವಿ ಚಿಕ್ಕವಯಸ್ಸಿನಲ್ಲಿ ವೈರಾಗ್ಯದ ಕಡೆ ಮನವನ್ನು ಕೇಂದ್ರೀಕರಿಸಿ, ವಚನಶಾಸ್ತ್ರ ಅಭ್ಯಾಸ ಮಾಡಿ ಎಲ್ಲಾ ಶರಣ ಶರಣೆಯರಿಗೆ ಕಿಂಕರಳಾಗಿ, ಶ್ರೀಶೈಲ ಮಲ್ಲಿಕಾರ್ಜುನನೇ ಗಂಡನೆಂದು ಭಾವಿಸಿ, ದೇವಮಾನವಳಾಗಿ ಅನುಭವ ಮಂಟಪದಲ್ಲಿ ಪ್ರಭುದೇವರ ಪ್ರಶ್ನೆಗಳಿಗೆ ನಿರ್ಭಯವಾಗಿ, ತಾರ್ಕಿಕವಾಗಿ ಉತ್ತರ ಕೊಟ್ಟು ಮಹಾದೇವಿ ಅಕ್ಕಮಹಾದೇವಿಯಾಗಿ ಎಲ್ಲಾ ಶರಣರ ಅಪ್ಪಣೆ ಪಡೆದು ಶ್ರೀಶೈಲಕ್ಕೆ ಬಂದು ಕದಳಿ ವನದಲ್ಲಿ ಐಕ್ಯಳಾದಳು.

ಸಾಧ್ವಿಶಿರೋಮಣಿ ಮಲ್ಲಮ್ಮ ಲೌಕಿಕ ಜಂಜಡದಲ್ಲಿ ಸಿಕ್ಕಿ ಘೋರತರ ಸಂಸಾರ ಸಾಗರದಲ್ಲಿ ಈಸಿ, ಪಾರಮಾರ್ಥಿಕ ತತ್ತ್ವಜ್ಞಾನದಲ್ಲಿ ಮಿಂದು ಮಡಿಯುಟ್ಟು ಜಯಗಳಿಸಿದ್ದು ಅಮೋಘ ಸಾಧನೆಯಲ್ಲದೆ ಮತ್ತೇನು! ಅಕ್ಕಮಹಾದೇವಿ, ದೇವರನ್ನೇ ಗಂಡನೆಂದು ಭಾವಿಸಿದಳು. ಮಲ್ಲಮ್ಮ ಗಂಡನನ್ನೇ ದೇವರೆಂದು ಭಾವಿಸಿದ್ದು ಅಪೂರ್ವ. ಕಾಯಕದಲ್ಲಿ ಶ್ರದ್ಧೆ, ದಾಸೋಹದಲ್ಲಿ ಸೇವೆ, ಲಿಂಗಪೂಜೆಯಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರ ಕಂಡುಕೊಂಡ ಆದರ್ಶ ಗೃಹಿಣಿಯಾಗಿ ಸಂಸಾರದಿಂದಲೂ ಸದ್ಗತಿ ಉಂಟಾಗುತ್ತಿದೆಂಬುದಕ್ಕೆ ಸಾಧ್ವಿ ಮಲ್ಲಮ್ಮನೇ ಸಾಕ್ಷಿ.

**ಆಧಾರ: ಚನ್ನಕವಿಗಳ ಮಲ್ಲಮ್ಮ ಪುರಾಣ, ಜಿ.ಹೆಚ್. ಕುಮಾರ – ರೆಡ್ಡಿ ಜನಾಂಗ.**

**ಬೆಂಗಳೂರು ವಿಜಯನಗರದ ಮನುವನದಲ್ಲಿರುವ ಶ್ರೀ ಗಣರಾಜ ದೇವಸ್ಥಾನದ ಮಹಾಕುಂಭಾಭಿಷೇಕ ಮತ್ತು ವಿಗ್ರಹಗಳ ಪುನರ್ ಪ್ರತಿಷ್ಠಾಪನೆ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.**



ವರದಿ

# ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

### ೧. ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವ (ಆಗಸ್ಟ್ ೧೫,೨೦೨೨)

೭೫ನೇ ವರ್ಷದ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವದ ಅಂಗವಾಗಿ ಸಿದ್ಧಗಂಗಾ ಆಸ್ಪತ್ರೆಯಲ್ಲಿ ಧ್ವಜಾರೋಹಣ ಕಾರ್ಯಕ್ರಮ ನಡೆಯಿತು. ಧ್ವಜಾರೋಹಣ ನೆರವೇರಿಸಿ ಮಾತನಾಡಿದ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ "ಭಾರತೀಯರಾದ ನಾವು ಸ್ವಾತಂತ್ರ್ಯ ಪೂರ್ವದಲ್ಲಿ ಅನುಭವಿಸಿದ ಧಾರ್ಮಿಕ ಹಾಗೂ ಅರ್ಥಿಕ ನಷ್ಟ ಹಾಗೂ ತ್ಯಾಗಬಲಿದಾನಗಳನ್ನು ಗಮನದಲ್ಲಿಟ್ಟುಕೊಂಡು ಈಗ ಸಿಕ್ಕಿರುವ ಸ್ವಾತಂತ್ರ್ಯ ಎಷ್ಟು ಮಹತ್ವದು ಅರಿತು ದೇಶಾಭಿಮಾನದ ಪಣತೊಡಬೇಕು" ಎಂದು ತಿಳಿಸಿದರು.

ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿ ಮಾತನಾಡಿ "ಸ್ವಾತಂತ್ರ್ಯ ರಕ್ಷಣೆಗೆ ನಮ್ಮ ಕರ್ತವ್ಯ ಹಾಗೂ ಜವಾಬ್ದಾರಿಗಳನ್ನು ಅರಿತುಕೊಂಡು ಪ್ರತಿಯೊಬ್ಬರು ಕರ್ತವ್ಯ ನಿರ್ವಹಿಸಿಬೇಕು. ನಮ್ಮ ಧ್ಯೇಯ, ನಮ್ಮ ಧರ್ಮ ಹಾಗೂ ನನ್ನ ತೀರ್ಪುಗಳು ನಮ್ಮ ಆಯ್ಕೆಯಾಗಿದ್ದರೂ, ಅದು ಬೇರೆಯವರಿಗೆ ನೋವು ತರಬಾರದು ಶಾಂತಿ ನಮ್ಮ ಧ್ಯೇಯವಾಗಬೇಕು" ಎಂದರು.

ಸ್ವಾತಂತ್ರ್ಯ ಹೋರಾಟಗಾರ ಶ್ರೀ ಟಿ.ಆರ್.ರೇವಣ್ಣರವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಸಿದ್ಧಗಂಗಾ ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿದ್ಧಗಂಗಾ ಸೂಪರ್ ಸ್ಪೆಷಾಲಿಟಿ ವಿಭಾಗದ ಮುಖ್ಯಸ್ಥ, ಹೃದ್ರೋಗ ತಜ್ಞ ಡಾ.ಭಾನುಪ್ರಕಾಶ್ ಹೆಚ್.ಎಂ.ಹಾಗೂ ಆಸ್ಪತ್ರೆ ವೈದ್ಯರು, ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

### ೨. ಸಿದ್ಧಗಂಗಾ ಮಠದ ಮಕ್ಕಳಿಗೆ ಆರೋಗ್ಯ ತಪಾಸಣೆ

ಪ್ರತಿ ವರ್ಷ ಸಿದ್ಧಗಂಗಾ ಮಠದಲ್ಲಿ ಸುಮಾರು ೧೦ ಸಾವಿರಕ್ಕೂ ಹೆಚ್ಚು ಮಕ್ಕಳಿಗೆ ಆರೋಗ್ಯ ತಪಾಸಣೆ ನಡೆಸುತ್ತಾ ಬಂದಿದೆ. ೨೦೨೨-೨೩ ನೇ ಸಾಲಿನ ಶೈಕ್ಷಣಿಕ ಶಾಲಾ ದಾಖಲಾತಿ ನಂತರ ಇದೇ ಆಗಸ್ಟ್ ೧೯ ರ ಶುಕ್ರವಾರ ಸಿದ್ಧಗಂಗಾ ಆಸ್ಪತ್ರೆ, ಶ್ರೀದೇವಿ ಮೆಡಿಕಲ್ ಕಾಲೇಜು, ಸಿದ್ಧಾರ್ಥ ಮೆಡಿಕಲ್ ಕಾಲೇಜು, ಶಂಕರ ಕಣ್ಣಿನ ಆಸ್ಪತ್ರೆ, ಪೀಡಿಯಾಟ್ರಿಕ್ ಡರ್ಮಟಾಲಜಿಸ್ಟ್ ಆಸೋಸಿಯೇಷನ್, ರಾಜರಾಜೇಶ್ವರಿ ವೈದ್ಯಕೀಯ ಆಸೋಸಿಯೇಷನ್, ಎ.ಮಂಜು ಹಾಗೂ ದಂತ ವೈದ್ಯಕೀಯ ಕಾಲೇಜು, ಚಾರಿಟಬಲ್ ಟ್ರಸ್ಟ್ ಹಾಗೂ ವಿವಿಧ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ಬೃಹತ್ ಆರೋಗ್ಯ ತಪಾಸಣೆ





ನಡೆಸಲಾಯಿತು. ಮಕ್ಕಳಿಗೆ ಕಾಣಿಸುವ ಸಾಮಾನ್ಯ ಆರೋಗ್ಯ ಸಮಸ್ಯೆಗಳಾದ ಜ್ವರ,ಕೆಮ್ಮು,ನೆಗಡಿ ಹಾಗೂ ಚರ್ಮರೋಗ ಸೇರಿದಂತೆ ವಿವಿಧ ರೀತಿಯ ಪರೀಕ್ಷೆಗಳನ್ನು ಆಸ್ಪತ್ರೆಯ ೧೫೦ ಕ್ಕೂ ಹೆಚ್ಚು ವೈದ್ಯರು ತಪಾಸಣೆ ನಡೆಸಿದರು. ಸಿದ್ಧಗಂಗಾ ಆಸ್ಪತ್ರೆಯ ನಿರ್ದೇಶಕ ಡಾ.ಎಸ್.ಪರಮೇಶ್, ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ.ಶಾಲಿನಿ, ಸಿದ್ಧಗಂಗಾ ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ. ನಿರಂಜನಮೂರ್ತಿ, ನರ್ಸಿಂಗ್ ವಿಭಾಗದ ಮುಖ್ಯಸ್ಥರಾದ ಎಸ್.ನಾಗಣ್ಣ ಸೇರಿದಂತೆ ಸೂಪರ್ ಸ್ಪೆಷಾಲಿಟಿ ಹಾಗೂ ಸ್ಪೆಷಾಲಿಟಿ ವೈದ್ಯರು ಹಾಗೂ ಸಿಬ್ಬಂಧಿ ಭಾಗವಹಿಸಿದ್ದರು.

**೩. ಸಿದ್ಧಗಂಗಾ ಆಸ್ಪತ್ರೆಯಲ್ಲಿ ನಡೆದ ಯಶಸ್ವಿ ಕ್ಲಿಷ್ಟ ಶಸ್ತ್ರಚಿಕಿತ್ಸೆಗಳಲ್ಲಿ ಆಯ್ದ ಕೆಲವು ಉದಾಹರಣೆಗಳು**

ತೀವ್ರ ತಲೆನೋವಿನಿಂದ ಆಸ್ಪತ್ರೆಗೆ ಆಗಮಿಸಿದ ಲಾವಣ್ಯರಿಗೆ ಸಾಕಷ್ಟು ಪರೀಕ್ಷೆಗಳ ನಂತರ ತಲೆಯಲ್ಲಿ ರಕ್ತ ಹೆಪ್ಪುಗಟ್ಟಿ ಕೋಮಾ ತಲುಪುವ ಹಂತದಲ್ಲಿರುವುದು ಪತ್ತೆಯಾಯಿತು. ನಮ್ಮ ನ್ಯೂರೋ ಸರ್ಜನ್ ಡಾ.ಅಜಯ್ ನಡೆಸಿದ ಯಶಸ್ವಿ ಶಸ್ತ್ರಚಿಕಿತ್ಸೆಯಿಂದ ಲಾವಣ್ಯ ಚೇತರಿಕೆ ಕಂಡರು.

ತೀವ್ರತರ ಜ್ವರದಿಂದ ಬಳಲುತ್ತಿದ್ದ ೫೦ ವರ್ಷದ ಮಹಿಳೆ ಸಿದ್ಧಗಂಗಾ ಮೆಡಿಕಲ್ ಕಾಲೇಜು ವಿಭಾಗದಲ್ಲಿ ದಾಖಲಾಗಿದ್ದರು. ನಮ್ಮ ಆಸ್ಪತ್ರೆಯ ಉಚಿತ ಆರೋಗ್ಯ ಸೇವೆಯಿಂದ ಕೆಲವೇ ದಿನಗಳಲ್ಲಿ ಗುಣಮುಖರಾದರು.

ಕಿಡ್ನಿ ಸ್ಟೋನ್‌ನಿಂದ ನರಳುತ್ತಿದ್ದ ೩೫ ವರ್ಷದ ಮಹಿಳೆಯೊಬ್ಬರು ಸಿದ್ಧಗಂಗಾ ಆಸ್ಪತ್ರೆಯ ಸ್ಪೆಷಾಲಿಟಿ ವಿಭಾಗಕ್ಕೆ ದಾಖಲಾಗಿದ್ದರು. ನಮ್ಮ ಆಸ್ಪತ್ರೆಯ ಯುರಾಲಜಿಸ್ಟ್ ಡಾ.ಅಭಿಲಾಷ್‌ರವರು ನೀಡಿದ ಯಶಸ್ವಿ ಶಸ್ತ್ರಚಿಕಿತ್ಸೆಯಿಂದ ಚೇತರಿಕೆ ಹೊಂದಿದರು.

ಹೃದ್ರೋಗ ಸಮಸ್ಯೆಯಿಂದ ಬಳಲುತ್ತಿದ್ದ ಪರಿಮಳ(೪೫) ಎಂಬುವವರು ಸಿದ್ಧಗಂಗಾ ಆಸ್ಪತ್ರೆಗೆ ತುರ್ತು ಚಿಕಿತ್ಸೆಗಾಗಿ ಆಗಮಿಸಿದರು. ಹೃದಯ ಸಮಸ್ಯೆಯಿರುವುದನ್ನು ಪತ್ತೆ ಹಚ್ಚಿದ ಹೃದ್ರೋಗ ತಜ್ಞ ಡಾ.ಭಾನುಪ್ರಕಾಶ್ ಹೆಚ್.ಎಂ. ತಕ್ಷಣವೇ ಆಂಜಿಯೋಪ್ಲಾಸ್ಟಿ ನಡೆಸಿ ಗುಣಮುಖರಾಗುವಂತೆ ಮಾಡಿದರು.

ಅಪಘಾತದಿಂದ ಕಾಲು ಮುರಿತಕ್ಕೆ ಒಳಗಾದ ಕಿರಣ್ ಎಂಬುವವರು ತುರ್ತು ಚಿಕಿತ್ಸೆಗಾಗಿ ಸಿದ್ಧಗಂಗಾ ಆಸ್ಪತ್ರೆಗೆ ಆಗಮಿಸಿದ್ದರು. ಕೀಲುಮೂಳೆ ತಜ್ಞ ಡಾ.ಆದರ್ಶ್ ರವರು ನಡೆಸಿದ ಚಿಕಿತ್ಸೆಯಿಂದಾಗಿ ಎಂದಿನಂತೆ ನಡೆಯುವಂತಾದರು.

ರಸ್ತೆ ಅಪಘಾತದಿಂದ ತಲೆಗೆ ತೀವ್ರತರ ಪೆಟ್ಟಾಗಿದ್ದ ನವೀನ್ ನಮ್ಮ ಆಸ್ಪತ್ರೆಯ ನ್ಯೂರೋ ಸರ್ಜನ್ ಡಾ.ಅಜಯ್‌ರವರು ನೀಡಿದ ಯಶಸ್ವಿ ಶಸ್ತ್ರಚಿಕಿತ್ಸೆಯಿಂದ ಚೇತರಿಕೆ ಹೊಂದಿದರು. ಅವರ ತಾಯಿ ಆಸ್ಪತ್ರೆಯ ಸೇವೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

**೪. ಜುಲೈ ಹಾಗೂ ಆಗಸ್ಟ್ ತಿಂಗಳಲ್ಲಿ ನಡೆದ ಸಿದ್ಧಗಂಗಾ ಮೆಡಿಕಲ್ ಕಾಲೇಜಿನಿಂದ ನಡೆದ ಶಿಬಿರಗಳು:**



ಜುಲೈ ೦೫ ರಂದು ಸಿದ್ಧಗಂಗಾ ಆಸ್ಪತ್ರೆ ಹಾಗೂ ನಿವೃತ್ತ ನೌಕರರ ಸಂಘದ ಸಹಯೋಗದಲ್ಲಿ ನಿವೃತ್ತ ನೌಕರರಿಗೆ ಉಚಿತ ಆರೋಗ್ಯ ತಪಾಸಣಾ ಶಿಬಿರ ನಡೆಸಲಾಯಿತು. ನೂರಕ್ಕೂ ಹೆಚ್ಚು ನಿವೃತ್ತ ನೌಕರರಿಗೆ ಆರೋಗ್ಯ ತಪಾಸಣೆ ನಡೆಸಲಾಯಿತು.

ಜುಲೈ ೦೮ ರಂದು ಕುಂಚಗಲ್ ಬಂಡೇಮಠದಲ್ಲಿ ಸಂಸ್ಕರಣೋತ್ಸವ ಹಾಗೂ ರಜತ ಮಹೋತ್ಸವದ ಅಂಗವಾಗಿ ಬೃಹತ್ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ನಡೆಸಲಾಯಿತು.

ಜುಲೈ ೧೭ ರಂದು ತುಮಕೂರು ವಿಶ್ವವಿದ್ಯಾಲಯದ ಆವರಣದಲ್ಲಿ ಉಚಿತ ಆರೋಗ್ಯ ತಪಾಸಣಾ ಶಿಬಿರ ನಡೆಯಿತು. ಸುಮಾರು ೧೦೦ ಕ್ಕೂ ಹೆಚ್ಚು ಸಾರ್ವಜನಿಕರು ಆರೋಗ್ಯ ತಪಾಸಣೆಗೆ ಒಳಪಟ್ಟರು.





ಜುಲೈ ೨೦ ರಂದು ಸಿದ್ಧಗಂಗಾ ಆಸ್ಪತ್ರೆ ಹಾಗೂ ದಾನ್ ಫೌಂಡೇಶನ್ ವತಿಯಿಂದ ನಗರದ ಗೌರಿಪುರದ ಸಾರ್ವಜನಿಕರಿಗೆ ಉಚಿತ ಆರೋಗ್ಯ ತಪಾಸಣೆ ನಡೆಸಲಾಯಿತು. ಸುಮಾರು ೧೫೦ ಕ್ಕೂ ಹೆಚ್ಚು ಸಾರ್ವಜನಿಕರು ಆರೋಗ್ಯ ತಪಾಸಣೆಗೆ ಒಳಪಟ್ಟರು.



ಜುಲೈ ೨೭ ರಂದು ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ಜಿಲ್ಲಾ ಕಾರಾಗೃಹ ಇಲಾಖೆ ವತಿಯಿಂದ ನಗರದ ಜಿಲ್ಲಾ ಕೇಂದ್ರ ಕಾರಾಗೃಹದಲ್ಲಿ ವಿಚಾರಣಾಧೀನ ಖೈದಿಗಳಿಗೆ ಉಚಿತ ಆರೋಗ್ಯ ತಪಾಸಣೆ ನಡೆಸಲಾಯಿತು.

ಜುಲೈ ೩೦ ರಂದು ಮಹಾಲಕ್ಷ್ಮಿ ಚಾರಿಟಬಲ್ ಟ್ರಸ್ಟ್ ಸಹಯೋಗದಲ್ಲಿ ವಯೋವೃದ್ಧರಿಗೆ ಉಚಿತ ಆರೋಗ್ಯ ತಪಾಸಣಾ ಶಿಬಿರ ನಡೆಸಲಾಯಿತು. ಸುಮಾರು ೬೦ ಕ್ಕೂ ಹೆಚ್ಚು ವೃದ್ಧರು ತಪಾಸಣೆಗೆ ಒಳಪಟ್ಟರು.

ಆಗಸ್ಟ್ ೦೭ ರಂದು ಸಿದ್ಧಗಂಗಾ ಆಸ್ಪತ್ರೆ ವತಿಯಿಂದ ಜಯನಗರದಲ್ಲಿ ಸಾರ್ವಜನಿಕರಿಗೆ ಉಚಿತ ಆರೋಗ್ಯ ತಪಾಸಣೆ ಶಿಬಿರ ನಡೆಯಿತು. ನಗರದ ೧೫೦ ಕ್ಕೂ ಹೆಚ್ಚು ಜನರು ಉಚಿತ ಆರೋಗ್ಯ ತಪಾಸಣೆಗೆ ಒಳಪಟ್ಟರು.



ಆಗಸ್ಟ್ ೦೯ ರಂದು ವಸಂತನರಸಾಪುರದ ನಿಖಿಲ್ ಅಡೆಸ್ಸಿವ್ ಲಿಮಿಟೆಡ್ ಹಾಗೂ ಸಿದ್ಧಗಂಗಾ ಆಸ್ಪತ್ರೆ ಸಹಯೋಗದಲ್ಲಿ ಉಚಿತ ಆರೋಗ್ಯ ತಪಾಸಣೆ ಶಿಬಿರ ನಡೆಯಿತು. ಸಿದ್ಧಗಂಗಾ ಆಸ್ಪತ್ರೆ ಹೃದ್ರೋಗ ತಜ್ಞ ಡಾ. ಹೆಚ್.ಎಂ. ಭಾನುಪ್ರಕಾಶ್ ಅವರು ನೌಕರರಿಗೆ ಹೃದ್ರೋಗ ತಪಾಸಣೆ ನಡೆಸಿದರು. ನಿಖಿಲ್ ಅಡೆಸ್ಸಿವ್ ಲಿಮಿಡೆಟ್ ನ ಪ್ರಮೋದ್ ನಾರಾಯಣ್ ಕುಂದೇರ್ ಉಪಸ್ಥಿತರಿದ್ದರು.

ಆಗಸ್ಟ್ ೧೦ ರಂದು ಗುಬ್ಬಿ ತಾಲೂಕಿನ ನಿವೃತ್ತ ನೌಕರರ ಸಂಘದ ವತಿಯಿಂದ ಗುಬ್ಬಿಯ ಸರ್ಕಾರಿ ನೌಕರರ ಭವನದಲ್ಲಿ ಉಚಿತ ಆರೋಗ್ಯ ತಪಾಸಣೆ ನಡೆಸಲಾಯಿತು. ಇದೇ ವೇಳೆ ಜಿರಿಯಾಟ್ರಿಕ್ ತಜ್ಞೆ ಹಾಗೂ ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ.ಶಾಲಿನಿರವರಿಗೆ ಸನ್ಮಾನ ಮಾಡಲಾಯಿತು.

ಆಗಸ್ಟ್ ೧೨ ರಂದು ಸಿದ್ಧಗಂಗಾ ಆಸ್ಪತ್ರೆ ಹಾಗೂ ತುಮಕೂರು ವಿವಿ ಸಹಯೋಗದಲ್ಲಿ ವಿಶ್ವ ಯುವಜನೋತ್ಸವ ಕಾರ್ಯಕ್ರಮ ಆಯೋಜಿಸಲಾಗಿತ್ತು. ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ.ಶಾಲಿನಿ ರವರು ಈ ಕಾರ್ಯಕ್ರಮದ ಉದ್ಘಾಟನೆ ನೆರವೇರಿಸಿ ಆರೋಗ್ಯ ಹಾಗೂ ಶುಚಿತ್ವದ ಬಗ್ಗೆ ವಿಶೇಷ ಉಪನ್ಯಾಸ ನೀಡಿದರು.



ಆಗಸ್ಟ್ ೧೪ ರಂದು ತುಮಕೂರು ನಗರದ ಶಿರಾ ಗೇಟ್‌ನಲ್ಲಿ ವಾಯುವಿಹಾರಿಗಳಿಗೆ ಉಚಿತ ಆರೋಗ್ಯ ತಪಾಸಣೆ ಹಾಗೂ ರಕ್ತದೊತ್ತ ಹಾಗೂ ಮಧುಮೇಹ ಪರೀಕ್ಷೆ ನಡೆಸಲಾಯಿತು.

ಆಗಸ್ಟ್ ೧೫ ರಂದು ಸಿದ್ಧಗಂಗಾ ಮೆಡಿಕಲ್ ಕಾಲೇಜು ಹಾಗೂ ನಿವೃತ್ತ ನೌಕರರ ಸಂಘದ ವತಿಯಿಂದ ಕುಣಿಗಲ್ ಪಟ್ಟಣದ ಕನ್ನಡ ಭವನದಲ್ಲಿ ನಿವೃತ್ತ ನೌಕರರಿಗೆ ಉಚಿತ ಆರೋಗ್ಯ ತಪಾಸಣೆ ಹಾಗೂ ಆರೋಗ್ಯ ಜಾಗೃತಿ ಕಾರ್ಯಕ್ರಮ ನಡೆಯಿತು. ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿರವರು ಕಾರ್ಯಕ್ರಮ ಉದ್ಘಾಟಿಸಿ ಆರೋಗ್ಯ ಜಾಗೃತಿ ಮೂಡಿಸಿದರು.







ಆಗಸ್ಟ್ ೧೫ ರಂದು ಬೆಂಗಳೂರು ಯಲಹಂಕ ಬಳಿಯ ರಮಣಶ್ರೀ ಕ್ಯಾಲಿಫೋರ್ನಿಯಾ ರೆಸಾರ್ಟ್ ಹಾಗೂ ರಮಣಶ್ರೀ ಬಡಾವಣೆಯಲ್ಲಿ ರಕ್ತದಾನ ಶಿಬಿರ ಏರ್ಪಡಿಸಲಾಗಿತ್ತು.

**೫.ವಿಶೇಷ ಫೇಸ್‌ಬುಕ್ ನೇರಪ್ರಸಾರ (ಲೈವ್) ಕಾರ್ಯಕ್ರಮ:**

ಆಗಸ್ಟ್ ೧೩ ರಂದು ವಿಶ್ವ ಅಂಗಾಂಗ ದಿನದ ಅಂಗವಾಗಿ ಫೇಸ್‌ಬುಕ್ ವಿಶೇಷ ನೇರಪ್ರಸಾರ ಕಾರ್ಯಕ್ರಮ ನಡೆಸಲಾಯಿತು. ನೇರಪ್ರಸಾರದಲ್ಲಿ ನಮ್ಮ ಆಸ್ಪತ್ರೆಯ ನೆಫ್ರಾಲಜಿಸ್ಟ್ ಡಾ.ಗಣೇಶ್ ಹಾಗೂ ನ್ಯೂರೋಸರ್ಜನ್ ಡಾ. ಅಜಯ್ ನೇರಪ್ರಸಾರದಲ್ಲಿ ಭಾಗವಹಿಸಿ ಅಂಗಾಂಗ ದಿನದ ಮಹತ್ವ ತಿಳಿಸಿದರು.

**ವರದಿ : ಕಾಂತರಾಜು, ಪಿಆರ್‌ಓ, ಸಿದ್ಧಗಂಗಾ ಆಸ್ಪತ್ರೆ**



**ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕೊಡ್ಲಿಪೇಟೆ ಊರುಮಠದ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ಪುಣ್ಯಾರಾಧನೆಯಂದು ಪೂಜ್ಯರ ಸದ್ಧಿಚ್ಛೆಯಂತೆ ಮಠದ ಉತ್ತರಾಧಿಕಾರಿಯಾಗಿ ಕಿರಿಕೊಡ್ಲಿ ಮಠಾಧೀಶರಾದ ಪೂಜ್ಯ ಶ್ರೀ ಶ್ರೀ ಸದಾಶಿವ ಸ್ವಾಮೀಜಿಯವರನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಘೋಷಿಸಿ ಅಧಿಕಾರ ಹಸ್ತಾಂತರಿಸಿದರು. ಈ ಸಂದರ್ಭದಲ್ಲಿ ಕಲ್ಲುಮಠದ ಪೂಜ್ಯ ಶ್ರೀ ಶ್ರೀ ಮಹಾಂತ ಸ್ವಾಮೀಜಿ, ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ಗಾವುಡಗರ ಮಠದ ಪೂಜ್ಯ ಶ್ರೀ ಶ್ರೀ ನಟರಾಜ ಸ್ವಾಮಿಗಳು, ಚನ್ನಪಟ್ಟಣದ ಪೂಜ್ಯ ಶ್ರೀ ಶ್ರೀ ಶಿವರುದ್ರ ಸ್ವಾಮೀಜಿ, ಬೆಟ್ಟದಪುರದ ಪೂಜ್ಯ ಶ್ರೀ ಶ್ರೀ ಚನ್ನಬಸವ ದೇಶಿಕೇಂದ್ರ ಸ್ವಾಮೀಜಿ, ಮನೆಹಳ್ಳಿ ಮಠದ ಪೂಜ್ಯ ಶ್ರೀ ಶ್ರೀ ಮಹಾಂತ ಶಿವಲಿಂಗ ಸ್ವಾಮೀಜಿ, ಕಲ್ಲಹಳ್ಳಿ ಮಠದ ಪೂಜ್ಯ ಶ್ರೀ ಶ್ರೀ ರುದ್ರಮುನಿ ಸ್ವಾಮೀಜಿ, ಶಿಡಿಗಳಲೇ ಮಠದ ಪೂಜ್ಯ ಶ್ರೀ ಶ್ರೀ ಇಮ್ಮಡಿ ಶಿವಲಿಂಗ ಸ್ವಾಮೀಜಿ, ಮಠದ ಪ್ರಮುಖರಾದ ಶ್ರೀ ದಿವಾಕರ ಮೊದಲಾದವರು ಉಪಸ್ಥಿತರಿದ್ದರು.**

### ಶ್ರೀವಾಣಿ

ಆರ್ಥಿಕವಾಗಿ ಬಡತನವಿರಬಹುದು. ಅದನ್ನು ಶ್ರಮ ದುಡಿಮೆಯಿಂದ ಅಭಿವೃದ್ಧಿಪಡಿಸಿಕೊಳ್ಳಬಹುದು. ಆದರೆ ಹೃದಯ ದಾರಿದ್ರ್ಯ ಬರಬಾರದು. ದೊಡ್ಡ ಸ್ಥಾನಗಳಲ್ಲಿರುವವರು ದೊಡ್ಡ ದೃಷ್ಟಿಯುಳ್ಳವರಾಗಬೇಕು. ಉದಾತ್ತ ಚಿಂತಕರಾಗಬೇಕು.







**ಸಾಂದರ್ಭಿಕ**

# ಶಿಕ್ಷಕರ ದಿನಕ್ಕೆ ಶೈಕ್ಷಣಿಕ ಅನುಭಾವ

**- ಸ. ರಘುನಾಥ**

ಬಸವಣ್ಣನವರನ್ನು ಓದಿ, ಓದಿ, ಓದುತ್ತಾ ಹೋದಂತೆ ಅಳೆಯಲು ಹೋದವವರು ಹಿಡಿದ ಮಾನಕವನ್ನು ಸಾಸಿವೆಯೊಂದು ಕಾಳಿಗೂ ಜಾಗವಿರದಂತೆ ತುಂಬಿರುತ್ತಾರೆ. ಚಟಾಕು, ಸೊಲಿಗೆ, ಪಾವು, ಪುಡಿ, ಸೇರು, ಬಳ್ಳ.... ಅಳೆಯೆ ಹಿಡಿದವರ ಯೋಗ್ಯತೆಯಷ್ಟಷ್ಟು ತುಂಬುವ ವಿಚಾರ ಬಸವಣ್ಣನವರದು. ಸಮಾಜಕ್ಕೆ ಸಂಬಂಧಿಸಿದ ಎಲ್ಲ ನಡವಳಿಕೆಗಳನ್ನು ನುಡಿದು, ನಡೆದ ಶರಣ ಗುಣವಂತ ಬಸವಣ್ಣ. ಹಾಗಾಗಿಯೇ ಅವರ ಬದುಕಿನಲ್ಲಿ ಶರಣರಾದಿಯಾಗಿ ಯಾರೊಬ್ಬರೂ ಅಪಶ್ರುತಿಯನ್ನು ಕಂಡುದಿಲ್ಲ. ಇಂಥ ಮಹಾನುಭಾವರ ಜೀವನ ಸಂಸ್ಕೃತಿಯ ಬಹುಮುಖ್ಯ ಅಂಗವಾದ 'ಓದು' (ಶಿಕ್ಷಣ), ಅದನ್ನು ಕಲಿವ, ಕಲಿಸುವವರ ಅಂತರಂಗ ಬೆಳಗುವಂತೆ ಹೇಳಿದ ವಚನ 'ಅಭಿಜಾತ'ವಾದುದೆಂದು ಮುವ್ವತ್ತೆಂಟು ವರ್ಷಗಳು ಪ್ರಾಥಮಿಕ ಶಾಲಾ ಶಿಕ್ಷಕನಾಗಿದ್ದ ನನಗೆ ಇಂದಿಗೂ ಅನ್ನಿಸುತ್ತಿದೆ.

**ಓದಿಸುವಣ್ಣಗಳೆನ್ನ ಮಾತಾಡ ಕಲಿಸಿದರಲ್ಲದೆ**
**ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯಾ,**
**ಧನಕ್ಕೆ ಮುನಿವರಲ್ಲದೆ, ಎನ್ನ ಮನಕ್ಕೆ ಮುನಿವರಿಲ್ಲಯ್ಯಾ,**
**ಧನಕ್ಕೆ ಮುನಿವರಿಗೆ ಮುನಿದು, ಎನ್ನ ಮನಕ್ಕೆ ಮುನಿದ**
**ಕೂಡಲಸಂಗಮದೇವಾ, ಮಡಿವಾಳ ಮಾಚಯ್ಯನು.**

ಮೊದಲ ಎರಡು ಸಾಲುಗಳು ಉಪಾಧ್ಯಾಯರಿಗೆ ನೇರ ಸಂಬಂಧಿಸಿದವು. ಏನು ಕಲಿಸಬೇಕಿತ್ತು, ಏನನ್ನು ಕಲಿಸಿದರು ಅನ್ನುವ ಪ್ರಶ್ನೆಯನ್ನು ಉತ್ತರದ ಮೂಲಕ ಹುಟ್ಟಿಸಿದ್ದಾರೆ. 'ಓದು' ಕಲಿಸಬೇಕಿದ್ದವರು ಕಲಿಸಿದ್ದು ಮಾತಾಡುವುದನ್ನು, ಸರಿಯೇ. ಆ ಮಾತಿನ ಗಮ್ಯವಿರಬೇಕಿದ್ದುದು 'ಮನಕ್ಕೆ ಮಾತಾಡ' ಕಲಿಸುವತ್ತ. ಆದರೆ ಅದನ್ನೇ ಕಲಿಸಲಿಲ್ಲ. ಇಲ್ಲಿಯೇ ಸಮಸ್ಯೆ ಹುಟ್ಟುವುದು. ಅಕ್ಷರಗಳನ್ನು ಬಲ್ಲ ಯಾರಾದರೂ ಅವುಗಳನ್ನು ಗುರುತಿಸಿ ಓದುವುದನ್ನು (ಪಠಣ) ಕಲಿಸಬಹುದು. ಈ ಮಾತ್ರದ ಓದಿಗೆ ಶಿಕ್ಷಕರ ಅಗತ್ಯವಿಲ್ಲ. ಬಸವಣ್ಣ ಹೇಳುವುದು 'ಓದ'ನ್ನು. ಅದು ಮನಕ್ಕೆ ಮಾತಾಡುವುದ ಕಲಿಸುವ ವಿದ್ಯೆ. ಅದು ಶರಣತ್ವ (ಜ್ಞಾನ, ಭಕ್ತಿ, ಸತ್ಯ, ಅಹಿಂಸೆ, ದಯೆ, ಕಾರುಣ್ಯ, ಸಹನೆ, ಶಾಂತಿ) ಸಾಮಾಜಿಕ ಸಂಸ್ಕೃತಿ ಮನಸ್ಸಿನದು. ಅದು ಮಾತಾಡಬೇಕು. ಅದಕ್ಕೆ ಮಾತಾಡುವುದನ್ನು ಕಲಿಸಬೇಕು. ಅದನ್ನು ಮಾಡದೆ ಓದಿಸುವಣ್ಣಗಳು ಕಲಿಸಿದ್ದು ಬಾಯಿಗೆ ಮಾತಾಡುವುದನ್ನು, ಅಂದರೆ 'ಓದಿಸುವ'ವರು ಮನವನ್ನು ಮೂಕವಾಗಿಸಿ, ಹೊರಗಿನ ಬಾಯಿ ಮಾತನ್ನು ಕಲಿಸಿದರು ಎಂಬುದು ಬಸವಣ್ಣನವರ ಅಳಲು.

ಬಸವಣ್ಣನವರ ಅಂದಿನ ಸಮಸ್ಯೆಯೇ ಇಂದಿನದೂ ಆಗಿರುವುದು. ಇದಕ್ಕೊಂದು ಉದಾಹರಣೆ: ನುಡಿವ ಇಂಗ್ಲಿಷ್ (ಸ್ಪೋಕನ್ ಇಂಗ್ಲಿಷ್)ನ ತರಗತಿಗಳ ಗದ್ದಲ. ಈ ಗದ್ದಲದಂತೆ, ಮಾತನಾಡುವುದನ್ನು ಕಲಿತರೆ ಸಾಕು, ನಿನಗೆ ಕ್ಯಾಂಪಸ್ ಸೆಲೆಕ್ಷನ್ ಗ್ಯಾರಂಟಿ ಎಂಬ ಭೋದನೆಗಳಿಗೂ ಕಡಿಮೆಯಿಲ್ಲ. ಸಂಕೋಚ, ಉತ್ಪ್ರೇಕ್ಷೆ ಎಂಬಂಥ ಮಾತುಗಳಿಗೆ ಬಾಯಿ ಕಟ್ಟಿಸಿದರೆ ಈ ವಚನವನ್ನು 'ಶೈಕ್ಷಣಿಕ ಅನುಭಾವ ವಚನ' ಎಂದು ಹೇಳಬೇಕು. ಏಕೆಂದರೆ ಈ ವಿಷಯದಲ್ಲಿ ಬಸವಣ್ಣನವರ ಕಾಲವೇ ಚಲನೆಯಿಲ್ಲದೆ ಇಂದಿಗೂ ನಿಂತುಬಿಟ್ಟಂತಿದೆ.

ಬಸವಣ್ಣನವರ ನೇರ, ದಿಟ್ಟತನಕ್ಕೆ ರುಜುವಾತು ಅವರ ವಚನಗಳು. ಇಲ್ಲಿಯೂ ಅದರ ಸೂಕ್ಷ್ಮತೆ, ತೀಕ್ಷ್ಣತೆಯನ್ನು ಅವರು ಕುಂದಿಸಿಲ್ಲ. ಶೈಕ್ಷಣಿಕ ಟೊಳ್ಳನ್ನು ಎತ್ತಿ ತೋರಿಸುತ್ತ ಅದರ ಜೊಳ್ಳನ್ನು ಕಣ್ಣಿಗೆ ಹಿಡಿದ್ದಾರೆ. ಕಲಿಸುವ ಶರಣತನ ಶಿಕ್ಷಕನದಾಗಬೇಕು. ಅವನು ಧನಕ್ಕೆ ಮುನಿಯಬೇಕು. ಹಾಗೆ ಮುನಿದ ಶಿಕ್ಷಕ ಮಡಿವಾಳ ಮಾಚಯ್ಯನಾಗುತ್ತಾನೆ. ಆದರೆ ಇಂದು ಧನಕ್ಕೆ ಶಿಕ್ಷಕನು ಮುನಿಯದಾಗಿದ್ದಾನೆ. ಹಾಗಾಗಿ ಅವನ ಮನ ಕಾಣೆಯಾಗಿದೆ. ಮೇಲಿನ ವಚನಕ್ಕೆ ಸಂವಾದಿಯಾಗಿ ಈ ಮುಂದಿನ ವಚನವಿದೆ.





ಓದಿನ ಹಿರಿಯರು, ವೇದದ ಹಿರಿಯರು,
ಶಾಸ್ತ್ರದ ಹಿರಿಯರು,
ಪುರಾಣದ ಹಿರಿಯರು, ವೇಷದ ಹಿರಿಯರು,
ಭಾಷೆಯ ಹಿರಿಯರು,
ಇವರೆಲ್ಲರು ತಮ್ಮ ತಮ್ಮನೆ ಮೆರೆದರಲ್ಲದೆ
ನಿಮ್ಮ ಮೆರೆದುದಿಲ್ಲ,
ತಮ್ಮ ಮರೆದು ನಿಮ್ಮ ಮೆರೆದಡೆ ಕೂಡಿಕೊಂಡಿಪ್ಪ
ನಮ್ಮ ಕೂಡಲಸಂಗಮದೇವರು.

ಇಲ್ಲಿ ವಿವಿಧ ವಿಭಾಗಗಳ ಮುಖ್ಯಸ್ಥರ 'ಹುದ್ದೆನಾಮ'ಗಳು ನೆನಪಾಗುವಂತಿವೆ. ಇವರು ಅವರವರ ಮಟ್ಟಿಗೆ ಹಿರಿಯರಾಗಿದ್ದಾರೆ. ತಮ್ಮ ತಮ್ಮನೆ ಮೆರೆದಿದ್ದಾರೆ. ಇವರು ಮೆರೆಸಬೇಕಾದದ್ದು ವಿದ್ಯೆಯನ್ನು, ಇವರೆಲ್ಲರು ತಮ್ಮ ತಮ್ಮ ಮನೆ ಮೆರೆದರಲ್ಲದೆ ನಿಮ್ಮ ಮೆರೆದುದಿಲ್ಲ. ಇವರೇನಾದರೂ ತಮ್ಮ ಮರೆದು ನಿಮ್ಮ ಮೆರೆದಡೆ ಇವರ ಭಾಗ್ಯಕ್ಕೆ ಎಣೆಯಿರದು. ಆಗ ಆಗುವುದೇನು? ಪ್ರಶ್ನೆಯೇ ಬೇಡ, ಬಸವಣ್ಣನವರೇ ಸಾರಿಬಿಟ್ಟಿರುವರು ಕೂಡಿ ಕೊಂಡಿಪ್ಪ ನಮ್ಮ ಕೂಡಲಸಂಗಮದೇವರು ಎಂದು. ಇದು ಬಸವಣ್ಣನವರು 'ಕಲಿಸುವಣ್ಣಗಳ' ಅರಿವಿಗೆ ತಟ್ಟಿಸುತ್ತಿರುವ ಸಹಜ, ಸರಳ ಸಂದೇಶ.

## ಶ್ರೀವಾಣಿ

ಪ್ರತಿನಿತ್ಯ ಮಲಗುವ ಮುನ್ನ, ನಡೆ ನುಡಿಗಳು, ನಡೆಸಿದ ಒಳಿತು ಕೆಡಕುಗಳ ಜಮಾಖರ್ಚನ್ನು ಅವಲೋಕಿಸಬೇಕು. ಮರುದಿನ ತುಳಿಯಬೇಕಾದ ಗುರುಪಥವನ್ನು ಹುಡುಕುವುದರ ಮೂಲಕ ಶಿವಪಥದ ಕಡೆಗೆ ಸಾಗಬೇಕು. ವಿಕಾರ ವಿಮುಖವಾಗಿ, ವಿಕಾಸ ಸಮುಖವಾಗಿ ಹೆಜ್ಜೆ ಹಾಕುವುದರ ಮೂಲಕ ವಿಕಾರಗಳನ್ನು ತನು, ಮನ, ಬುದ್ಧಿಯ ವಿಕಾರಗಳನ್ನು ಗೆಲ್ಲಬೇಕು.

* * *

ಎಲ್ಲಿಯವರೆಗೆ ನಮ್ಮ ದೃಷ್ಟಿ, ಭಾವನೆ, ಆಲೋಚನೆ, ಕೆಲಸ ಕಾರ್ಯಗಳು ದೊಡ್ಡವಾಗುವುದಿಲ್ಲವೋ ಅಲ್ಲಿಯವರೆಗೆ ನಾವು ದೊಡ್ಡವರಾಗುವುದಿಲ್ಲ ಎಂಬುದನ್ನು ತಿಳಿಯಬೇಕು.

## ಸಿದ್ಧಗಂಗೆಯ ಶ್ರೀಗಳು

ಅರಿವೆಂಬ ಗುರು ಒಂದು
ಕುರುಹಿನ ಲಿಂಗ ಒಂದು
ನೆರವಿನ ಜಂಗಮ ಒಂದು
ಒಂದು, ಒಂದು, ಒಂದು, ಒಂದಾಗಿನಿಂದು
ಒಂದು ನೂರಾ ಹನ್ನೊಂದು.

ಅರಿದೊಡೆ ಒಂದು, ಮರೆದೊಡೆ ಮತ್ತೊಂದು
ಅಲ್ಲೊಂದು, ಇಲ್ಲೊಂದು ಅದು ತಾನೊಲ್ಲೆಂದು

ಗುರು ಲಿಂಗ ಜಂಗಮವೇ
ತಾನಾಗಿ ನೆಲೆನಿಂದು
ಬೆಳಗಿದರೀ ಧರೆಯ ವರುಷ
ಒಂದು ನೂರಾ ಹನ್ನೊಂದು
ಆ ಬೆಳಕು ಅಂದು, ಇಂದು, ಎಂದೆಂದೂ

ಹಸಿದವರ ಹೊಟ್ಟೆಗಿರಲಿ
ಅನ್ನವು ಒಂದು,
ಬಯಸಿದವರ ನೆತ್ತಿಗಿರಲಿ
ಜ್ಞಾನವು ಒಂದು
ಅರಿವಿಂದುಣ್ಣಲು ಕಾಯಕವು ಮತ್ತೊಂದು
ಅಲೊಂದು, ಇಲ್ಲೊಂದು, ಅದು ತಾನೊಲ್ಲೆಂದು
ತ್ರಿವಿಧ ದಾಸೋಹಗೈದ ಬಸವ ಬಂಧು
ಸಾರ್ಥಕ್ಯ ಪಡೆದವು ವರುಷ
ಒಂದು ನೂರಾ ಹನ್ನೊಂದು.

ಹಣೆಯ ಮೇಲಿನ ಮೂರೆಳೆಯ ವಿಭೂತಿ
ನಿಲುವಾಗಿ ನಿಂದು, ಸಾರಿದವು ಸಾಕಿನ್ನು
ಒಂದು ನೂರಾ ಹನ್ನೊಂದು,
ಹರನಾದರೇನು ? ಗುರುವಾದರೇನು ?
ನರನಾಗೀ ಧರೆಗಿಳಿದ ಮೇಲೆ
ಶರಣನಾಗಿ ಬಂದು, ಲಿಂಗೈಕ್ಯ ಹೊಂದು
ಮರಣವೇ ಮಹಾನವಮಿ ಎಂದು.

– ಭೀಮರಾಯ ಹೇಮನೂರ
ಕಲಬುರಗಿ